# ಶ್ರೀ ರಂಗಯ್ಯನವರ ಚರಿತ್ರೆ



ಜಿ ಕೇಶವಾಚಾರ್ಯ (ಅಯ್ಯನವರ ವಂಶೀಕರು)
ಕೌತಾಳ, ಆದವಾನಿ ತಾಲ್ಲೂಕು :: ಕರ್ನೂಲು ಜಿಲ್ಲಾ

# ಶ್ರೀ ರಂಗಯ್ಯನವರ ಚರಿತ್ರೆ

ಲೇಖಕ :

**ಕೆ. ಅಪ್ಪಣ್ಣಾಚಾರ್ಯ**

ಸ್ಪೆಷಲ್ ಆಫೀಸರ್

ದಾಸಸಾಹಿತ್ಯ ಪ್ರಾಜೆಕ್ಟ

ತಿರುಮಲ ತಿರುಪತಿ ದೇವಸ್ಥಾನಗಳು

**ತಿ ರು ಪ ತಿ**

ಪ್ರಕಾಶಕರು :

**ಜಿ ಕೇಶವಾಚಾರ್ಯ** (ಅಯ್ಯನವರ ವಂಶೀಕರು)

**ಕೌತಾಳ, ಆದವಾನಿ ತಾಲ್ಲೂಕು :: ಕರ್ನೂಲು ಜಿಲ್ಲಾ**



ರಂಗಯ್ಯನವರ ದೇವಾಲಯ



ಸಾಲಂಕೃತ ರಂಗಯ್ಯನವರ ವೃಂದಾವನ



ರಂಗಯ್ಯನವರು ನಿರ್ಮಿಸಿದ

" ಚನ್ನಕೇಶವ ದೇವಾಲಯ "



ರಂಗಯ್ಯನವರಿಗೆ ವಲಿದು ಬಂದ
ಶ್ರೀ ಚೆನ್ನಕೇಶವಮೂರ್ತಿ



ಸಾಲಂಕೃತ ಚನ್ನಕೇಶವ



ರಂಗಯ್ಯನವರು ನಿರ್ಮಿಸಿದ "ಉಟ್ಲ ಮಂಟಪ"


ರಂಗಯ್ಯನವರ ವಂಶವೃಕ್ಷ
ಅಂಬಣ್ಣಭಟ್ಟ
ವೆಂಕಪ್ಪ
ರಂಗಯ್ಯ
ಸಖಪ್ಪ
ತಮ್ಮಣ್ಣ
ಆಯ್ಯಪ್ಪ
ಮಾಕಪ್ಪ
ರಂಗಪ್ಪ
ಭಾಯಪ್ಪ
ಕಲ್ಲಪ್ಪ
ಸಣ್ಣಪ್ಪ
ಪೋಲಪ್ಪ
ಕೇಶವಪ್ಪ
ವೆಂಕಪ್ಪ
ರಾಮಣ್ಣ
ಕೇಶವಪ್ಪ
ವೆಂಕಪ್ಪ
ಕೃಷ್ಣಪ್ಪ
ವೆಂಕಪ್ಪ
ರಂಗಪ್ಪ
ಕುಬೇರಪ್ಪ
ವೆಂಕಪ್ಪ
ಸಣ್ಣರಂಗಪ್ಪ
ಭೀಮಪ್ಪ
ರಂಗಪ್ಪ
ಕೇಶವಪ್ಪ (ಹಾಜರು)
ಕೃಷ್ಣಪ್ಪ (ಹಾಜರು)
ವೆಂಕಪ್ಪ (ಹಾಜರು)
ಪರಿಮಳ (ಹಾಜರು)
ರಾಮ (ಹಾಜರು)
ಭೀಮಪ್ಪ (ಹಾಜರು)
ರಂಗಪ್ಪ
ಬದ್ರಿನಾರಾಯಣ (ಹಾಜರು)
ನರಸಿಂಹ (ಹಾಜರು)
ಜಗನ್ನಾಥ (ಹಾಜರು)

# ಪ್ರಕಾಶಕರ ಮಾತು

ಯಾವ ಜನ್ಮದಲ್ಲಿ ನಾನು ಮಾಡಿದ ಪುಣ್ಯವೋ ಅಥವಾ ನಮ್ಮ ಹಿರಿಯರು ಮಾಡಿದ ಕನಸ್ಸಿನ ಫಲವೋ ಇದೀಗ ನಾನು ಪೂಜ್ಯರಾದ ರಂಗಯ್ಯನವರ ವಂಶದಲ್ಲಿ ಜನಿಸಿದ್ದೀನಿ. ಅವರ ಸೇವಾಭಾಗ್ಯ ದೊರೆತಿದೆ. ಇಂತಹವರ ಉಪಕಾರ ಸ್ಮರಣವಾಗಿ ಅವರ ಪೂಜನೀಯ ಜೀವನ ಚರಿತ್ರೆ ಪ್ರಚುರಿಸ ಬೇಕೆಂದು ಎಷ್ಟೋ ದಿನದ ವಾಂಛೆಯಾಗಿತ್ತು.

ಇವರ ಮಹಿಮೆಯನ್ನು ಎಷ್ಟು ಸ್ಮರಿಸಿದರು ಸಾಲದು. ಅವಧೂತ ಶಿಖಾಮಣಿಗಳಾಗಿ, ಭಗವದ್ಭಕ್ತರಾಗಿ, ನಂಬಿ ಸೇವಿಸುವವರಿಗೆ ಕಾಮಧೇನು ವಾಗಿದ್ದಾರೆ. ನಾನು ಅನುಚಾನವಾಗಿ ಕೇಳಿದ್ದು ಮತ್ತೆ ಅನುಭವಕ್ಕೆ ಬಂದ ಕೆಲವು ವಿಷಯಗಳನ್ನು ಹೇಳದೇ ಇರಲಾರೆ

ಇವರ ಸಮಕಾಲೀಕರಾಗಿ ಪ್ರಖ್ಯಾತರಾದ ಕೌತಾಳ ಗ್ರಾಮದ ಮುಹಮ್ಮದೀಯ ಭಗವದ್ಭಕ್ತ ಖಾದರು ಲಿಂಗಪ್ಪ ಇವರ ಸ್ನೇಹಿತರಂತೆ. ಒಮ್ಮೆ ಅವರು ಇವರನ್ನು ಕಾಣಲು ಹುಲಿಯ ಮೇಲೆ ಕುಳಿತು ಬರಲು ಇವರು ತಾವು ಕುಳಿತುಕೊಂಡ ಮೊಂಡ ಗೋಡೆಯನ್ನೇ ನಡೆಸಿಕೊಂಡು ಹೋಗಿ ಅವರನ್ನು ಭೇಟಿಯಾದರಂತೆ ಆ ಮುಸ್ಲೀಂ ಮಹನೀಯನ ಕೋರಿಕೆಯಂತೆ ಉಗಾದಿ ಯಿಂದ ಆತನ ಸ್ಥಳದಲ್ಲಿ ಪಂಚಾಂಗಶ್ರವಣ ಮಾಡುವುದಾಗಿ ಒಪ್ಪಿಕೊಂಡರಂತೆ ಆದರಂತೆ ಇಂದಿಗೂ ಆತನ ಸ್ಥಳದಲ್ಲಿ ಪಂಚಾಂಗಶ್ರವಣ ನಡೆಯುತ್ತಿದೆ.

ಅಯ್ಯನವರ ವಂಶಜರಿಗೆ ಯಾರಿಗೂ ಮಕ್ಕಳಿಲ್ಲ. ಎಲ್ಲರೂ ದತ್ತತೆ ಯಿಂದ ಬಂದವರು. 5ನೆಯ ಸಂತತಿಯವರಾದ ಭೀಮಾಚಾರ್ಯರಿಗೆ ಮಕ್ಕಳಿರಲಿಲ್ಲ. ಚಿಕ್ಕ ವಯಸ್ಸಿನಲ್ಲೇ ಭೀಮಾಚಾರ್ಯರು ತೀರಿಕೊಂಡರು ಆಗ ಅದೇ ವಂಶದಲ್ಲಿನ ವೆಂಕಮ್ಮನ 2ನೇ ಮಗನಾದ ನನ್ನನ್ನು ದತ್ತತ

ತಿಗೆದುಕೊಂಡರು. ಅಂದು ರಾತ್ರಿ ರಂಗಾಚಾರ್ಯರ ಸ್ವಪ್ನದಲ್ಲಿ ರಂಗಯ್ಯನವರು ದ್ರವ್ಯದ ಪಾತ್ರೆಯನ್ನು ಹಿಡಿದುಕೊಂಡು ಹೋಗುತ್ತಿದ್ದರಂತೆ. ಅದನ್ನು ನೋಡಿದ ರಂಗಾಚಾರ್ಯರು ಏನಪ್ಪ ಅಷ್ಟು ದ್ರವ್ಯಪಾತ್ರೆ ತೆಗೆದು ಕೊಂಡು ಹೋಗುತ್ತಾಯಿದ್ದಿ ನನಗೆ ಕೊಡಬಾರದೆ ಅಂದರಂತೆ. ಅದಕ್ಕೆ ಅಯ್ಯನವರು ಈ ದ್ರವ್ಯ ನಿಮ್ಮ ಮೊಮ್ಮಗನ ಮಗನಿಗೆ ಕೊಡುತ್ತೇನಿ ಎಂದು ಹೇಳಿ ತಮ್ಮ ಗುಡಿಹಾದಿ ಹಿಡಿದರಂತೆ ಅವರು ನುಡಿದಂತೆ ದತ್ತತೆಯ ಕೃಪು ನಿಂತು ನನಗೆ ಸಂತಾನದ ಭಾಗ್ಯ ಆಗಿದೆ.

ನಮ್ಮ ತಾಯಿ ಯಂಕಮ್ಮನವರಿಗೆ ಒಂದು ರಾತ್ರಿ ಸುಮಾರು 4 ಘಂಟೆ ಸಮಯದಲ್ಲಿ ರಂಗಯ್ಯನವರ ಗುಡಿಯಲ್ಲಿ ಮಂಗಳಾರತಿ ಘಂಟೆ ಶಬ್ಧಗಳು ಕೇಳುತ್ತಿದ್ದವಂತೆ. ಎದ್ದು ಗುಡಿ ಕಡೆ ನೋಡಲು ಅಲ್ಲಿಯ ಪ್ರದೇಶವೆಲ್ಲಾ ಧೂಪದೀಪಗಳಿಂದ ಜಾಜ್ವಲ್ಯ ಮಾನವಾಗಿ ಕಾಣಿಸಿಕೊಂಡು ಒಂದೇಲೆ ಮಾಮೂಲು ಪರಿಸ್ಥಿತಿಯಲ್ಲಿ ಕಾಣುತ್ತಿದ್ದವಂತೆ.

ನಮ್ಮ ಗ್ರಾಮದ ಭೀಮಯ್ಯನೆಂಬಾತನು ನಿತ್ಯ ಅಯ್ಯನವರ ಗುಡಿಗೆ ಬಂದು ನಮಸ್ಕಾರ ಹಾಕುತ್ತಿದ್ದನು. ಒಂದು ದಿನ ಅವನು ಮನೆಯಲ್ಲಿ ಮಲಗಿದ್ದಾಗ ಕನಸಿನಲ್ಲಿ ಅಯ್ಯನವರು ದರ್ಶನ ಕೊಟ್ಟು ಯೇನಯ್ಯ ನನ್ನ ಗುಡಿಯ ಆವರಣದಲ್ಲಿಯ ಭಾವಿಯಲ್ಲಿ ನಮ್ಮವರ ಕುದರಿ ಮರಿಬಿದ್ದು ಒದ್ದಾಡುತ್ತಿದೆ, ಹೋಗಿ ಅವರಿಗೆ ತಿಳಿಸಿ ಕುದರಿ ಮರಿಯನ್ನು ತೆಗೆಸು ನಡಿ ಎಂದು ಹೇಳಿದರಂತೆ ಅದರಂತೆ ಒದಿಬಂದು ಮನೆಯವರಿಗೆ ತಿಳಿಸಿ ಆ ಕುದುರೆ ಮರಿಯನ್ನು ಹೊರಗೆ ತೆಗೆಸಿದರು.

1944ರಲ್ಲಿ ಪೆದ್ದಮ್ಮ ಎಂಬಾಕಿ ನಮ್ಮ ಮನೆಯಲ್ಲಿ ಪ್ರತಿ ದಿನದ ಮನೆ ಕೆಲಸಗಳೆಲ್ಲಾ ಮುಗಿಸಿ ತನ್ನ ಮನೆಯನ್ನು ಸೇರಿ ಸ್ನಾನಮಾಡಿ ಗುಡಿಗೆ ಬಂದು ನೋಡಲಾಗಿ ಗುಡಿಯ ಬೈಲು ಭಾಗದಲ್ಲಿ ನಾಲ್ಕು ಬಿಳಿ ಕುದುರೆಗಳು ಮೇಯು ತ್ತಿದ್ದವಂತೆ. ಹಾಗೂ ಅಲ್ಲಿಯ ಗೋಡೆಯ ಮೇಲೆ ಒಬ್ಬ ಬ್ರಾಹ್ಮಣ ಕೂತಿದ್ದು ಕಂಡು ಆ ಮಹಿಳೆ ಏನು ಸ್ವಾಮಿ ಅಸು ಕುದುರೆಗಳನ್ನು ಬಿಟ್ಟು ಮೇಯಿಸಿದರೆ ನಮ್ಮ ಆಚಾರ್ಯರು ನಮ್ಮನ್ನು ಬೈದಾರು ಅಂದಳಂತೆ.

ಅದಕ್ಕೆ ಅಯ್ಯನವರು ಆ ಮುದುಕಿಗೆ ಅವರಿಗೆ ಒಳ್ಳೇದಾಗಲೆಂದೇ ಬಿಟ್ಟಿದ್ದೀವಿ ಅಂದರಂತೆ. ಅಷ್ಟರಲ್ಲಿ ಎಲ್ಲಾ ಅದೃಶ್ಯವಾಯಿತಂತೆ.

ನನ್ನ ಸ್ವಾನುಭಾವ 3-8-84ರಲ್ಲಿ ನನ್ನ ಮಗಳ ವಿವಾಹ ನಿಶ್ಚಯ ವಾಗಿತ್ತು. ಮದುವೆ ಮುಂಚೆ 14 ದಿನಗಳಿಂದ ಪ್ರತಿನಿತ್ಯ ಮಳೆ ಬಂದು ಮನೆಗಳು ತಟಗುಟ್ಟುತ್ತಿದ್ದವು. ಮಳೆಗೆ ಬಿಡುವೇ ಇಲ್ಲ. ಬೆಳಗಾದರೆ ದೇವತಾ ಸಮಾರಾಧನೆ ಮುಂದೆ ಬೀಗರು ಬರುತ್ತಾರೆ ಅವರನ್ನು ಎಲ್ಲಿ ಇಳಿಸಲಿ ಮದುವೆ ಸಮಾರಂಭ ಹೇಗಾದೀತು ನಿನ್ನನ್ನೇ ನಂಬಿದ್ದೀನಿ ಎಂದು ಬೇಡಿಕೊಂಡ. ಆತನ ಕೃಪೆಯಿಂದ ಅಂದಿನಿಂದ 14 ದಿನದವರೆಗೂ ಒಂದು ಹನಿಕೂಡ ಮಳೆ ಬೀಳಲಿಲ್ಲ. ಮದುವೆ ನಿರ್ವಿಘ್ನವಾಗಿ ನಡೆಯಿತು.

ಇಂತಹ ಅನೇಕ ನಿದರ್ಶನಗಳು ನಮಗೂ ಇವರ ಇತರ ಭಕ್ತರಿಗೂ ಆಗಿವೆ. ನಮ್ಮ ಹಿರಿಯರು ಅಯ್ಯನವರೇ ಇಭುರಾಮಪುರದ ಅಪ್ಪವರಾಗಿ ಜನಿಸಿದರೆಂದು ಹೇಳುತ್ತಿದ್ದರು.

ಇಭುರಾಮಪುರದ ಅಪ್ಪನವರ ಪೂರ್ಣಾನುಗ್ರಹಕ್ಕೆ ಪಾತ್ರರಾದ ಪೂಜ್ಯ ಗುರು ಜಗನ್ನಾಥದಾಸಾಚಾರ್ಯರ ವಂಶಜರಾದ ಅಪ್ಪಣ್ಣಾಚಾರ್ಯರು ಅಯ್ಯನವರ ಜೀವನ ಚರಿತ್ರೆಯನ್ನು ಬರೆದುಕೊಟ್ಟಿದಕ್ಕೆ ಅವರಿಗೆ ಸುದೀರ್ಘ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಅವರಿಗೆ ರಂಗಯ್ಯನವರು ಅವರ ಅಂತರ್ಯಾ ದಿಂದ ಮೇಲ್ಗಿರಿವಾಸಭಿನ್ನ ಶ್ರೀ ಚನ್ನಕೇಶವ ಸಂಪೂರ್ಣಾನುಗ್ರಹಮಾಡಲಿ ಎಂದು ಕೋರುತ್ತೇನೆ. ಅವಧಿ ಕಮ್ಮಿಯಿದ್ದರು ಶ್ರಮವಹಿಸಿ ಪುಸ್ತಕವನ್ನು ಮುದ್ರಿಕೊಟ್ಟ ಅನುಪಮ ಪ್ರಿಂಟರ್ಸ್‌ನ ಕೆ. ಎಸ್. ಶ್ರೀಪತಿಯವರಿಗೂ ನನ್ನ ವಂದನೆಗಳು.

ಇತಿ

ಜೆ. ಕೇಶವಾಚಾರ್ಯ

ಕೌತಾಳ

ವೀರ ರಘುಪತಿ ವಿಠಲದಾಸರಿಂದ ರಚಿಸಲ್ಪಟ್ಟ

# ಶ್ರೀ ರಂಗಯ್ಯನವರ ಚರಿತ್ರೆ

**ರಾಗ : ತೋಡಿ** **ತಾಳ : ಝಂಪೆ**

ಮಂಗಳ ಶುಭಾಂಗನೆ ರಂಗಯ್ಯನೇ
ತುಂಗ ಮಹಿಮೋದಾರ ಮಹರಾಯನೇ ॥ ಪ ॥

ಜನನವು ಕವಿತಾಳ ಜೋಯಿಸರ ವಂಶದಲಿ
ನಸುನಗುತ ಕೂಸಾಗಿ ಐದನೇ ವರ್ಷದಿ
ಸನುಮತದಿ ತೋಪೆಂಬ ಗ್ರಾಮಕ್ಕೆ ತೆರಳವಾ
ಮನುಮಥನ ಪಿತ ಮಧ್ಯಮಾರ್ಗ ದರ್ಶೀ ॥ ೧ ॥

ಘಲ್ಲು ಘಲ್ಲನೆ ಗೆಜ್ಜೆ ಶಬ್ದ ಮಾಡುತ ಬಂದು
ಮೆಲ್ಲನೇ ಹಿಂಗಾಲು ತುಳಿಯಲಾಗ
ಎಲ್ಲ ದಿಕ್ಕುಗಳಲ್ಲಿ ನೋಡೆ ಕಾಣಿಸದಿರಲು
ಅಲ್ಲಿದ್ದ ಹಳ್ಳಕ್ಕೆ ತೃಷಿಲಿ ಪೋಗೀ ॥ ೨ ॥

ಚಿಲುಮೆ ತೋಡಲು ದಾಸವೇಷದಿಂ ಕೆಡಿಸುತಿಹ
ಕಲಹ ಕಂಟಕ ಕೆಡಿಸಬೇಡೆನ್ನುತಾ
ಹಲವು ಬಗೆ ಪೇಳೆ ನಿಜದಾಸ ನೀನಾದೊಡೆ
ಸುಲಭ ದೇವರ ದೇವ ಬಿಡುವೆನೆಂದ ॥ ೩ ॥

ಭೂಸುರನು ನಾನಾಗೆ ನಿನದಾಸನೆಂತಾಡೆ
ಭಾಸುರಾಂಗನೆ ಪೇಳ್ವೆ ಶೂದ್ರ ಕುಲಜಾ
ಈಸುಮಾತುಗಳ್ಯಾಕೆ ವೇಷಧಾರಿಯೆ ವೆಂಕ
ಟೇಶ ನೀನಾದಡೆ ತೋರು ನಿಜರೂಪದೀ ॥ ೪ ॥

ಶ್ರೀನಿವಾಸನು ವಿಶ್ವರೂಪವನು ತೋರಿಸಿ
ತಾನೆ ಜಿಹ್ವೆಯಲಿ ಬೀಜ ಬರೆದೂ
ದಾನವಾಂತಕನು ಅಂತರ್ಧಾನವೈದನು ಅಲ್ಲಿ
ಮೌನದಲೆ ಮಂದಿರಕೆ ತೆರಳಿದ ನಾಗ || ೫ ||

ಹುಚ್ಚನಂದದಿ ಚರಿಸೆ ಜನರೆಲ್ಲ ನಗುತಲಿ
ಹುಚ್ಚರಂಗಯ್ಯನಂದ್ಕರೆ ಹೊಕ್ಕರೂ
ಹುಚ್ಚಾಟದ ತಿರುಪತಿಗೆ ಮಾತೆಸಹಿತದಿ ಹರಿಯ
ಉತ್ಸವಕೆ ಪೋಗೆ ನಾಲ್ಕೈದು ದಿನದೋಳ್ || ೬ ||

ನೀನಿದ್ದ ಸ್ಥಳದಲ್ಲಿ ನಿರಂತರವು ನಾನಿರಲು
ಏನು ಕಾರಣ ಬಂದ್ಯೋ ಇಲ್ಲಿಗೆನಲೂ
ಧ್ಯಾನ ಮಾಡುತ ಹರಿಯ ದಶಮಿಯ ರಾತ್ರಿಯಲಿ
ಜ್ಞಾನಾಶ್ವರೂಢನಾಗೋರ್ವ ಬರಲೂ || ೭ ||

ಮಾತೆ ಏನಾದಳೆಂತೆಂದಗ್ರಜಕೇಳೆ
ಪ್ರೀತಿಯಿಂದಿಹಳು ವೆಂಕಟಗಿರಿಯಲ್ಲಿ
ಅತ್ತ ತಾಯಿಯೊಡನೆ ವೆಂಕಟಾಗಿರಿಯಿಂದ
ಮತ್ತೆ ನೀ ಬಂದು ಶ್ರೀ ಹರಿಯ ಮಹಿಮೆಯತೋರ್ದೆ || ೮ ||

ಪುರಜನರು ಬರೆ ಪ್ರಶ್ನೆಮಾಡಿ ನಿಜವೆನ್ನಲಾ
ವರದವೆಂಕಟ ವಲಿದನೆಂದೂ
ಪರಿಪರೀ ಪರೀಕ್ಷಿಸುತ ಸಕಲ ಸಜ್ಜನ ತಿಳಿದು
ಮರೆಯದೆ ಭಕುತಿ ಮಾಡುತ್ತ ಬಂದರೂ || ೯ ||

ಚಿರುತಪಲ್ಲೀ ಗ್ರಾಮದವರು ಜಲಕಾಣದಲೆ
ಅರಿಕೆ ಮಾಡಲು ಆಗ ಸ್ಥಳ ತೋರಿಸೀ
ತ್ವರಿತದಿಂ ಕೂಪ ತೋಡೆನಲು ಬಂಡೆಯಾ ಬೀಳೆ
ಕರಿದು ಶಿಲಾ ಬಂಧನದ ಮಾಡಿಸಿದೆಯೋ || ೧೦ ||

ಅರೆಬಂಡೆ ಬಿದ್ದ ಚೆರುತಪಲ್ಲೀ ಭಾವಿಯಲ್ಲ
ಪರಿಪರಿಲಿ ವಿಪ್ರ ಭೋಜನವ ಮಾಡಿಸೀ
ಭರವಶದಿ ಸ್ಥಳ ತೋರಿ ಹಾರಿಯಿಂದೋಡಿಸೆ
ಸಾಗರದಿ ಓಲ್ ಜಲಪೂರ್ಣವಾಗಲಾಗಾ ॥ ೧೧ ॥

ಶಿಘರಿ ಸಾಲಿಗ್ರಾಮ ಅದರೊಳಗೆ ಇರಿಸಿದೆಯೊ
ಅಪರಿಮಿತ ಧೃವಜಲವು ನಿಂದ್ರುವಂತೆ
ಕೃಪೆಯ ವರ್ಣಿಸಲಿಕ್ಕೆ ಅರಿಗೂ ಅಸದಳವು
ತಪಸೀ ತವ ಚರಣಕ್ಕೆ ನಮೋ ಎಂಬೆನೋ ॥ ೧೨ ॥

ಶ್ರೀಶೈಲಯಾತ್ರೆಗೆ ಪೋರಮಟ್ಟು ಮಾರ್ಗದಿಹ
ಲೇಸಾದ ಕರುನೂಲು ಸೇರಲೂ
ದಾಪುಳ್ಳ ಕೃಷ್ಣರಾಯನೆಂಬ ಮಂತ್ರಿಯೂ
ಸೋಸಿಲಿಂ ರಾಜಮಂಡಿರದ ಬಳಿಯಲೀ ॥ ೧೩ ॥

ಉತ್ಸವದಿ ಕರೆತಂದು ತನ್ನ ಸದನದೊಳಿರಿಸೆ
ಮ್ಲೇಚ್ಛಗುರು ಕಣ್ಣು ಕಿಡಿಗಳುದರಿಸುತಲೀ
ಹೆಚ್ಚುಳ್ಳದೇವಡಿಯ ಬದಿಯ ಮೆರೆಸಿದ ಪರಿಯಂ
ತುಚ್ಛವೆನುತಾ ಪ್ರಭುವಿಗೆ ಭೋದಿಸೆ ॥ ೧೪ ॥

ಈರ್ಷ್ಯದಿಂ ಕೊಲ್ಲಿಪುದುಚಿತವೆನೆ ವೇಳೆ
ಪಾರ್ವ ಪ್ರಧಾನಿಯಂ ಕರೆಕರೆಸಲೂ
ಊರ್ವಿದೇವತೆಗಳೇ ಪೋಪೆ ಅಲ್ಲಿಗೆ ಎನಲು
ಮಾರಪಿತ ಕ್ಷೇಮಮಾಡಿಪ ಎನ್ನಲೂ ॥ ೧೫ ॥

ಅನುಜ್ಞೆಯಂ ಸ್ವೀಕರಿಸಿ ಧಣಿಯ ದರುಶನಕೋಗೆ
ಮನುಜಪತಿ ಆಗ್ರಹವು ಕಡಿಮೆಯಾಗಿ
ಸನ್ನಿಧಿಗೆ ಪೋಗಲು ಶಾಂತತವ ಪೊಂದುತಲಿ
ಸನುಮಾನಮಾಡಿ ಕೂಡ್ರಿಸಿದನಾಗಾ ॥ ೧೬ ॥

ದೇವಡಿಯ ಬಳಿಯಲ್ಲಿ ಬ್ರಾಹ್ಮಣನ ಮರಿಸಿದ್ದು
ದಾವನ್ಯಾಯವು ಎಂದು ನಗುತ ಕೇಳೇ
ಕಾವ ದೇವರ ದೇವ ತಿರುಪತೀಶನು ಎನಲು
ಸಾವಧಾನದಿ ದರುಶನಕೆ ಬರುವೆನೆನೆ ॥ ೧೭ ॥

ಥಟ್ಟನೆ ಸ್ನಾನವಂ ಮಾಡಿ ಪೂಜಾದ್ರವ್ಯ
ಇಷ್ಟದಿಂ ಕೊಂಡು ಬಂದನಾಗಾ
ಶಿಷ್ಟನಲಿ ಖಾಜಿಯು ಮಾಂಸಪೂರಿತವಾದ
ತಟ್ಟೆಯಂ ತಂದನೂ ಆಚ್ಛಾದಿಸಿ ॥ ೧೮ ॥

ಬಾಲಾಜಿ ದರ್ಶನವು ಮಾಡಿಸೆನ್ನಲು ಮಂತ್ರಿ
ವ್ಯಾಳ್ಯಲ್ಲ ಆಹ್ನೀಕ ಮಾಳ್ಪರೆಂದಾ
ಕಾಲನಿರೀಕ್ಷಣೆ ಮಾಡೆ ಕರೆಯು ಬರುತಲಿ ತಂದ
ಮಾಲ್ಯಾದಿಗಳನಿಟ್ಟು ನಮನ ಮಾಡೆ ॥ ೧೯ ॥

ಖಾಜತಾ ತಂದ ಪಾತ್ರೆಯ ಮುಂದಕ್ಕೆ ಸರಿಸಲೂ
ಮಾಜದ ಪಲಾಲವನೆ ಈಕ್ಷಿಸೀ
ಸಾಜದಿಂ ಜಲಪ್ರೋಕ್ಷಿಸಲು ಪುಷ್ಪಫಲವಾಗೆ
ಈ ಜಗದ ಜನರು ಆಶ್ಚರ್ಯಗೊಂಡರೂ ॥ ೨೦ ॥

ಇದು ಮೋಸವೆಂದೆನುತ ಭೂಪದಂಡಿಸಿ ಅವನ
ಸದಮಲಾ ಭಕುತಿಯಿಂ ಪೇಳ್ದನಾಗ
ಭರದಿ ಈ ದೇಶದಲಿ ವರ್ಷವಿಲ್ಲದೆ ಕ್ಷಾಮ
ಅಧಿಕವಾಗಿಹುದು ಮಳೆ ತರಿಸಿರೆನಲೂ ॥ ೨೧ ॥

ಅಂದಮಾತನು ಕೇಳಿ ಮೂರು ದಿನದೋಳ್ ವೃಷ್ಟಿ
ಬಂದಿತೆನ್ನಲು ದಿವಸವೆರಡು ನೋಡಿ
ಅಂದಿಗೂ ಬಾರದಿರೆ ಮಂತ್ರಿ ಭಯದಿಂದೊಜ್ರ
ಇಂದು ಕೊಳ್ಳುವೆನೆಂದು ನಿಶ್ಚಯಿಸಿದಾ ॥ ೨೨ ॥

ಷಃಡಧಿಯನು ಕರೆದುದರ ಬಾಧೆಯು ತಾನೆ
ಕಡಃಶ್ರಮುವ ಗೊಳಿಪುದು ಆದಗೋಸುಗಾ
ತಡವಾಡದಲೆ ಜಲವು ತಾರೆನಲು ಬರುವಾಗ
ಸಡಗರದಿ ಔಷಧದ ಕುಡಿವೆ ನೆಂದಾ || ೨೩ ||

ಬಿಡದೆ ಯಜಮಾನನ್ನ ಕರೆತರಲು ಸಮ್ಮುಖಕೆ
ಜಡಮತಿಯೆ ವಿಷ ಸೇವಿಸುವಿ ಯಾತಕೋ
ಬಿಡು ನಿನ್ನ ಕ್ಲೇಸವನು ವರ್ಷ ಬರುವುದು ಆಂದು
ಜಡಜಾಕ್ಷನನುಗ್ರುಹದಿ ಸಃಜಗೆನಲೂ || ೨೪ ||

ಪರಿವಾರ ಜನರೆಲ್ಲ ಪರಿಪರಿಲಿಯೋಚಿಸುತಲಿ
ಥರವಲ್ಲ ಇಲ್ಲಿಪ್ಪುದೆಂದು ತೆರಳೆ
ಭರವಶದಿ ಚನ್ನಯ್ಯ ಸ್ಥಿರದಿ ನಿಂತನು ನಿಮ್ಮ
ಚರಣಧ್ಯಾನದಲ್ಲೋರ್ವನೇ ಬಿಡದಲೇ || ೨೫ ||

ಮೂರನೇ ದಿವಸ ಸಾಯಾಹ್ನದೋಳ್ ಮೋಡವೂ
ತೋರದೆ ಬಹಳ ನಿರ್ಮಲಾವಾಗೆ
ಧೀರ ಚನ್ನಯ್ಯ ಈ ವಾರ್ತೆಯಂ ಪೇಳಲೂ
ನಾರಿಕೇಳವು ಕೊಟ್ಟು ದೂರ ಬಿಸುಟೆನ್ನಲೂ || ೨೬ ||

ಮೊದಲ ಫಲಹಾಕುತಲೆ ಮೇಘ ಸ್ವಲ್ಪವು ಕಾಣೆ
ಇದು ನೋಡಿ ಬೇರೊಂದು ಒಗಿಯಲಾಗ
ಬದರಿ ಫಲವೋಲ್ ಹನಿಯು ಬೀಳುತ ಘನವರ್ಷ
ಅಧಿಕವಾಗಿ ಸುರಿಯೆ ದೇವಡೇ ಬೀಳಲೂ || ೨೭ ||

ದೊರೆ ತನ್ನ ಸತಿಯಳನ ಕೆರಕೊಂಡು ಅಂಗಡಿಯಲಿ
ಮರುಗುತಲೆ ನಿಂತ ಮಳೆ ಫೆದರಿಕೊಂಡು
ಕರಿಸಿ ಮಂತ್ರಿಗೆ ತಿಳಿಸೆ ಕಡುದೈನ್ಯದಿಂದುಸುರೆ
ಕರುಣದಿಂದಾಕ್ಷಣದೊಳ್ ಮಳೆ ನಿಲ್ಲಿಸಿದೆ || ೨೮ ||

ಪರ್ವತದ ಯಾತ್ರಿಗೆ ಹೋಗಿ ಪುನರಪಿ ಬರಲು
ಹರುಷದಿಂ ವಿತ್ತ ಕೊಡೆ ನಿರಾಕರಿಸಲೂ
ಧರಣಿಪನು ತನ್ನ ಶಿರವ ತರಿಯಲು ಪೋಗಲೂ ಆಗ
ಕರಪಿಡಿದು ವಾರಿಸಿದೆಯೊ ಕರುಣದಿಂದಾ || ೨೯ ||

ಯಾದವಾಗಿರಿಯಲ್ಲಿ ಮೇದಿನೀಯೊಳಗಿದ್ದ
ಆದಿಕೇಶವನೆಂಬ ಮೂರ್ತಿಯನ್ನು
ನೀ ದಯದಿ ಕೊಡುವಂತೆ ಬರೆಸಿ ಕೌತಾಳದಲ್ಲಿ
ಸಾದರದಿ ಗುಡಿಕಟ್ಟಿಸೆನ್ನಲಾಗಾ || ೩೦ ||

ದೇವಾಲಯವು ಉಟ್ಲು ಮಂಟಪಗೋಪುರಗಾದಿ
ಸಾವಿರಾರು ವೆಚ್ಚಗಳು ನಿಷ್ಕಪಡಿಸೀ
ಠೀವಿಯಲಿ ನೃಪನು ಗುಡಿಯ ಕಟ್ಟಿಸೆ ಅದರಲ್ಲಿ
ದೇವರನ್ನ ಸ್ಥಾಪಿಸಿದ್ಯೊ ಶುಭಲಗ್ನದೋಳ್ || ೩೧ ||

ಅಂದಿನಾರಭ್ಯ ಭಕುತಿಪೂರ್ವಕವಾಗಿ
ಛಂದದಿಂ ಫಣಿಗೆರಗಿ ಪೋಷಮುಡುಪು
ಮಂದಿ ಕೆಲವರು ತಂದು ಇಲ್ಲಿ ಕೊಡುತಿದ್ದರೂ
ನಂದ ನಂದನ ಆಜ್ಞದೀ ಮೋದದೀ || ೩೨ ||

ಒಂದಿನದಿ ವಾದೀಂದ್ರಯತಿ ತಾನೆ ನಸುನಗುತ
ಛಂದದಿಂದಲಿ ತಪ್ತ ಮುದ್ರೆಯನು ಕೊಡಲೂ
ಇಂದಿರೇಯರಸನ ದಾಸನಾ ದೇಹದೋಳ್
ಹಿಂದೆ ಮುಂದೇ ಶಂಖ ಚಕ್ರ ಕಾಣಿಸಲು || ೩೩ ||

ನಸುನಗುತ ವಾದೀಂದ್ರ ಶಿಷ್ಯನಾ ಭರದಪ್ಪಿ
ವಸುಧಿಯೊಳ್ಲೇ ನೀ ಮೆರೆಯೋ ರಘುರಾಮದೂತ
ಅವನ ಮಹಿಮೆಯು ಕಂಡು ಪುರುಷೋತ್ತಮಾರ್ಯತಾ
ಬೆಸಗೊಂಡ ತಾ ನಿನ್ನ ಮಹಿಗೇನೆಂಬೆ || ೩೪ ||

ವಾದೀಂದ್ರ ಶಿಷ್ಯ ಪುರುಷೋತ್ತಮಾರ್ಯರೀ
ಮೋದದಿಂದಲಿ ನೀವೆ ವಸುಧೇಂದ್ರರಾಗುವಿರಿ
ಎಂದೆಂದಿಗೂ ನಿಮ್ಮ ಎನ್ನಯ ಸಂಬಂಧವೂ
ಕುಂದದಲೆ ಬೆಳಗಲಿ ಎಂದು ನೀ ನುಡಿದೆ || ೩೫ ||

ನಿರ್ಯಾಣ ಕಾಲವುಂ ನಿರ್ಣಯಿಸಿ ಗುರುಗಳಿಗೆ
ಬರುವದೆಂದೆನುತ ಬಿನ್ನಹವ ಗೈಯ್ಯುತ
ಹರಿ ದರುಶನವ ವೃಂದಾವನಕೆ ಕೊಡಿಸುತ್ತ
ಧರಣಿಸುತ ಭೋಜನವ ಮಾಡಿಸೆಂದೆ || ೩೬ ||

ಕ್ಷಯನಾಮ ಸಂವತ್ಸರದ ವೈಶಾಖ ಬಹುಳದಿ
ಪ್ರಿಯ ಉಳ್ಳ ದ್ವಾದಶಿಯ ದಿವಸದಲ್ಲಿ
ದೈತ್ಯಾರಿ ಧ್ಯಾನಿಸುತ ಪರಿಭಟರ ಯುಕ್ತದಿಂ
ವಯನ ಮಾರ್ಗವ ಪಿಡಿದಿ ಅತಿಮೋದದೀ || ೩೬ ||

ವೃಂದಾವನಸ್ಥನಂ ಮಾಡಲು ನಾ ಮುದದಿ
ಯಿಂದಿನಂದದಿ ಮಾತನಾಳ್ವೆನೆಂದು
ಛಂದದಿಂದಲಿ ಪೇಳಿ ದೇಹವ ಬಿಡಲು ಶಿಷ್ಯರೂ
ಸುದೇಹದಿಂದದನು ದಹನ ಮಾಡೇ || ೩೮ ||

ಕನಸಿನಲಿ ಬಂದು ಕಿರಿಬೆರಳು ಕೌಪೀನವೂ
ಒಣಗದಿಹ ತುಳಸಿ ಮಾಲೆಯೂ ಉಳಿದಿವೆ
ಅನುಮಾನಿಸದೆ ಇವನು ತಂದ ವೃಂದಾವನದೊಳಿರಿಸೆ
ಘನಮಹತ್ತುಗಳೆಲ್ಲ ತೋರಿಸುವೆನೆಂದೀ || ೩೯ ||

ಸುರಭಿಯಾನದಿಂ ಕುಂಭಕೋಣ ಪಟ್ಟಣಕೋಗಿ
ಗುರುಗಳಿಗೆ ಜ್ಞಾಪಕ ಕೊಟ್ಟು ತೆರಳೆ
ತ್ವರಿತದಿಂ ಹನ್ನೊಂದನೇ ದಿವಸ ಬಂದಲ್ಲಿ
ಪರಿ ಪರಿ ಬೋಧಿಸುತ ಮಹಿಸುರರಿಗೇ || ೪೦ ||

ರಾಮಚಂದ್ರನ ಪೂಜೆ ವೃಂದಾವನದ ಬಳಿಲಿ
ನೇಮದಿಂ ಗೈದು ಬ್ರಾಹ್ಮಣ ಭೋಜನಾ
ಪ್ರೇಮದಿಂದಲಿ ಮಾಡಿಸೆ ಮುಂದಕ್ಕೆ ಹೊರಟರೂ
ಸ್ವಾಮಿಗಳು ಪರಮ ವೈಭವಯುತದಲೀ || ೪೧ ||

ನಿನ್ನಲ್ಲಿ ಭಕುತಿಯೂ ನಿನ್ನವರ ಸಹವಾಸ
ಚನ್ನಕೇಶವನಂಘ್ರಿ ಧ್ಯಾನ ಸತತಾ
ಚೆನ್ನಾಗಿ ನೀನಿತ್ತು ಎನ್ನ ಧನ್ಯನ ಮಾಡೋ
ಅನ್ಯನಲ್ಲವೊ ನಿನ್ನ ಭಕುತನಿಹೆನೋ || ೪೨ ||

ಸೇರಿ ಭಜಿಪರಿಗಿಷ್ಟ ಫಲಕೊಟ್ಟು ರಕ್ಷಿಸೋ
ಕಾರುಣ್ಯ ಮೂರುತಿಯೆ ಕಡು ಪ್ರೀತಿಲೀ
ವೀರ ರಘುಪತಿ ವಿಠಲನಾ ದಾಸನೇ ನಾ ನಿತ್ಯ
ಸಾರುವೆನು ತವ ಕೀರ್ತಿ ದಿಗ್ದೇಶದೋಳ್ || ೪೩ ||



# ಶ್ರೀ ರಂಗಯ್ಯನವರ ಚರಿತ್ರೆ

" ಕಂಗನಾಮಾಭಿಧಂ ವಂದೆ ಕಾತಾಳಪುರವಾಸಿನಂ
ವೈರಾಗ್ಯಭಾಗ್ಯಸಂಪನ್ನಂ ಭಕ್ತಾಭೀಷ್ಟಪ್ರದಾಯಕಂ "

ಪೂರ್ವದಲ್ಲಿ ಆಂಗೀರಸ ಗೋತ್ರೋತ್ಪನ್ನನಾದ ಬ್ರಾಹ್ಮಣನಿಗೆ ಎರಡನೆಯ ಹೆಂಡತಿಯಲ್ಲಿ ಒಬ್ಬ ಮಗನು ಹುಟ್ಟಿದನು. ಇವನ ಹೆಸರು ಜಡಭರತ. ಇವನು ಹುಟ್ಟಿನಿಂದಲೇ ಮಹಾಜ್ಞಾನಿ. ಸದಾ ಅಂತರ್ಮುಖನು. ಹೃದಯಾಂತರ್ಯಾಮಿ ಭಗವಂತನ ನಿರಂತರಾರಾಧಕನು.

ಮೂಕ ಬಧಿರರಂತಿಪ್ಪರೋ ನೋಳ್ಪ ಜನಕೆ
ಕಾಕು ಯುಕುತಿಗಳನ್ನು ತಾರರೋ ಮನಕೆ

ಎಂಬ ದಾಸರ ವಚನಕ್ಕೆ ಈ ಜಡಭರತನು ಉದಾಹಣೆಯಾಗಿದ್ದ, ಅಂತರಂಗದಿ ನಿರಂತರ ಹರಿಪಾದಧ್ಯಾನಾಸಕ್ತನಾದ ಜಡಭರತನನ್ನು ಅಜ್ಞಜನರು ಹುಚ್ಚನೆಂತಲೂ, ಜಡನೆಂತಲೂ, ಕಿವುಡನೆಂತಲೂ ಕರೆದರು. ಜಡಭರತನು ಸಹ ತನ್ನ ನೈಜವನ್ನು ತೋರಗೊಡದೆ ಹುಚ್ಚನಂತೆ ಇರುತ್ತಿದ್ದನು. ಸ್ವರೂಪಾನಂದವನ್ನು ಹೊಂದಿ ಸರ್ವತ್ರ ಭಗವಂತನನ್ನು ಕಾಣುವ ಜಡಭರತನಿಗೆ ಸುಖ-ದುಃಖಗಳೆರಡೂ ಸಮಾನವಾಗಿದ್ದವು. ದೇಹಾಭಿಮಾನದಿಂದ ದೂರನು ಇವನು. ಮಣ್ಣಿನಿಂದ ಮುಚ್ಚಲ್ಪಟ್ಟ ಮಾಣಿಕ್ಯದಂತೆ ಜಡಭರತನ ಬ್ರಹ್ಮವರ್ಚಸ್ಸು ಅಜ್ಞಜನರಿಗೆ ಕಾಣದಾಗಿತ್ತು. ಇದು ಭಾಗವತ ಪಂಚಮಸ್ಕಂಧದಲ್ಲಿ ಬರುವ ಕಥೆ.

ಜಡಭರತನಂಥಾ ಅನೇಕ ಮಹಾತ್ಮರು ಕರ್ಮಭೂಮಿ ಎನಿಸಿದ ಭಾರತದಲ್ಲಿ ಜನ್ಮತಾಳಿ, ಸಮಾಜವನ್ನು ಪವಿತ್ರಗೊಳಿಸಿದ್ದಾರೆ. ಈ ಸತ್ಪುರುಷರಿಗೆ ಸೇರಿದ ಮಹಿತಾತ್ಮರೇ ಶ್ರೀ ರಂಗಯ್ಯನವರು. ಕ್ರಿ. ಶ. 1687ರ ಪ್ರಾಂತದಲ್ಲಿ ಜನ್ಮ ತಾಳಿದ ಈ ಪುತಾತ್ಮರು ಜನಸಾಮಾನ್ಯರ ದೃಷ್ಟಿಯಲ್ಲಿ ಒಂದು ಅರಿ

ಯದ ಮುಂದರಂತೆ ಜೀವನ ನಡೆಸುತ್ತಾ, ಅಂತರಂಗದಲ್ಲಿ ನಿರಂತರ ಶ್ರೀರಂಗನ ಪಾದಪದ್ಮಗಳನ್ನು ಚಿಂತಿಸುವ ಏಕಾಂತ ಭಕ್ತರಾಗಿದ್ದರು

ಇದೀಗ ಕರ್ನೂಲು ಜಿಲ್ಲೆಗೆ ಸೇರಿದ ಕೌತಾಳ 17ನೇ ಶತಮಾನದಲ್ಲಿ ಕವಿತಾಳವಾಗಿತ್ತು. ಸಸ್ಯಶ್ಯಾಮಲವಾದ ಈ ಗ್ರಾಮ, ಕವಿಗಳಿಗೆ ನಿಲಯ, ಸಾಹಸಿಗಳಿಗೆ ನೆಲೆವೀಡಾಗಿತ್ತು. ಇದಕ್ಕೆ ಸೂಚಕವಾಗಿಯೇ ಇಂದಿಗೂ ಗ್ರಾಮ ದಲ್ಲಿ ವೀರರ ಕಟ್ಟೆಗಳು ಅಚ್ಚಳಿಯದೆ ನಿಂತಿವೆ. ನಿರತರಾಗಿ ಪರಸ್ಪರ ಸೌಹ ರ್ದತೆಯಿಂದ ಬಾಳನ್ನು ಸಾಗಿಸುತ್ತಿದ್ದರು. ಈ ಗ್ರಾಮದ ಜನರು "ಸಹನಾ ವವತು ಸಹನೌ ಭುನಕ್ತು ಸಹವೀರ್ಯಂ ಕರವಾವಹೈ ತೇಜಸ್ವಿನಾವಧೀತ ಮಸ್ತು ಮಾವಿಹದ್ವಿಷಾವಹೈ" ಎಂಬ ಶ್ರುತಿವಾಕ್ಯವನ್ನು ವ್ಯವಹಾರದಲ್ಲಿ ಸತ್ಯ ಗೊಳಿಸಿದ ಧನ್ಯಜೀವಿಗಳು. ಎಲ್ಲರೂ ಸಹಜೀವನವನ್ನು ನಡೆಸುತ್ತಾ, "ತ್ಯೇನ ತ್ಯಕ್ತೇ ಭುಂಜೀಥಾಃ" ಎನ್ನುವಂತೆ ಭಗವಂತನಿಂದ ಕೊಡಲ್ಪಟ್ಟ ಸುಖ–ಸಂಪತ್ತುಗಳನ್ನು ಅನುಭವಿಸುತ್ತಿದ್ದರು. ಪರಸ್ಪರ ಸಹಕಾರದೊಟ್ಟಿಗೆ ತೇಜೋ ವಂತರಾಗಿ ಬಾಳುತ್ತಿದ್ದರು. ಕವಿತಾಳ ಧರ್ಮಕ್ಕೆ ತವರೂರಾಗಿತ್ತು.

ಗ್ರಾಮದಲ್ಲಿ ಸದಾಚಾರ ಸಂಪನ್ನರಾದ ಅನೇಕ ಸದ್ಬ್ರಾಹ್ಮಣರ ಮನೆ ಗಳಿದ್ದವು. ಪ್ರಾತಃಕಾಲದಿಂದ ರಾತ್ರಿಯವರೆಗೆ ಎಲ್ಲರ ಮನೆಗಳಲ್ಲೂ ಭಗವದಾ ರಾಧನೆ, ಅತಿಥಿ ಅಭ್ಯಾಗತರಿಗೆ ಸತ್ಕಾರ, ಸತ್ಕಥಾಶ್ರವಣಗಳು ನಡೆಯುತ್ತಿದ್ದವು ಎಲ್ಲರ ಮನೆಗಳೂ ದೇವಾಲಯಗಳಾಗಿದ್ದವು. ಸತ್ಯ–ಶೌಚ–ಧರ್ಮಗಳು ಎಲ್ಲರ ಮನೆಗಳಲ್ಲೂ ಗೂಡುಕಟ್ಟಿ ನಿಂತಿದ್ದವು.

ಅಂಬಣ್ಣಭಟ್ಟರು ಊರಿನ ಪುರೋಹಿತರು, ಗ್ರಾಮದ ಎಲ್ಲಾ ಜನರ ಸುಖ–ಸಂತೋಷಗಳನ್ನು ಬಯಸುತ್ತಾ, ಎಲ್ಲರ ಅಭಿಮಾನಕ್ಕೂ ಪಾತ್ರ ರಾಗಿದ್ದರು. ಇವರ ಮನೆದೇವರು ಉರುಕುಂದಿ ಎಂಬ ಪವಿತ್ರ ಕ್ಷೇತ್ರದ ಅಧಿ ದೇವತೆಯಾದ ಶ್ರೀ ನೃಸಿಂಹದೇವರು. ಈ ಕ್ಷೇತ್ರವು ಇದೀಗ ಕರ್ನೂಲು ಜಿಲ್ಲಾ ಆದವಾನಿ ತಾಲ್ಲೂಕಿಗೆ ಸೇರಿದ್ದಾಗಿದೆ. ಅಂಬಣ್ಣನವರು ಕೌತಾಳಕ್ಕೆ ಮಾತ್ರವಲ್ಲದೆ ಉರುಕುಂದಿ, ಓಬಳಾಪುರ, ತಿಮ್ಮಾಪುರ, ಬಾಪುರ, ದೊಂಬಲ

ದಿನ್ನಿ ಗ್ರಾಮಗಳಿಗೂ ಪುರೋಹಿತರಾಗಿದ್ದರು. ಇವರ ಧರ್ಮಪತ್ನಿ ಲಕ್ಷ್ಮಕ್ಕ. ಭಟ್ಟರಿಗೆ ಸಕಾಲದಲ್ಲಿ ಒಂದು ಗಂಡು ಮಗುವಾಯಿತು. ಅವನಿಗೆ ವೆಂಕಪ್ಪ ಎಂದು ನಾಮಕರಣ ಮಾಡಿದರು. ಒಂದು ಕಣ್ಣು ಕಣ್ಣಲ್ಲ ಒಬ್ಬ ಮಗ ಮಗನಲ್ಲ ಎಂಬ ನಾಣ್ಣುಡಿಯನು ಬಲ್ಲ ಅಂಬಣ್ಣನವರು, ಮತ್ತೊಬ್ಬ ವಂಶೋದ್ಧಾರಕ ಪುತ್ರನನ್ನು ಕರುಣಿಸು ಎಂದು ಭಗವಂತನನ್ನು ಪ್ರಾರ್ಥಿಸಿದರು.

ಭಗವತ್ಪ್ರೇರಣೆಯಿಂದ ಸತಿಪತಿಯರು ಒಮ್ಮನಸ್ಸಿನಿಂದ ಭಗವದಾರಾಧನಾ ತತ್ಪರರಾದರು. ವಿಶೇಷ ಸೇವೆಯನ್ನೂ ನಿಯಮಗಳನ್ನೂ ಆಚರಿಸಿದರು. ಸಾಧ್ವಿ ಲಕ್ಷ್ಮಕ್ಕ ವಯೋವ್ರತವನ್ನಾಚರಿಸಿದಳು. ಕುಲಕೋಟಿಗಳನ್ನು ಉದ್ಧರಿಸಬಲ್ಲ ಭಗವತೋತ್ತಮನಾದ ಪುತ್ರನಿಗಾಗಿ ಅವಳ ಮನಸ್ಸು ಕಾತರಿಸ ಹತ್ತಿತು.

ಸ್ವಾಮಿ ಸೇವೆಯಿಂದ ಪೂತಳಾದ ಲಕ್ಷ್ಮಮ್ಮನ ಮನೋಬಯಕೆ ಈಡೇರಿತು. ಅವಳು ಗರ್ಭಿಣಿಯಾದಳು. ದೇಹದಲ್ಲಿ ಹೊಸ ಕಾಂತಿಯು ಮನೆ ಮಾಡಿತು. ಗರ್ಭಿಣಿ ಲಕ್ಷ್ಮಮ್ಮನ ಬಯಕೆಗಳು ಲೋಕವಿಲಕ್ಷಣವಾಗಿದ್ದವು. ಸಂತತ ಏಕಾಂತದಲ್ಲಿ ಶ್ರೀಕಾಂತನ ಚಿಂತನೆಯಲ್ಲೇ ಇರುತ್ತಿದ್ದಳು. ಆಗಾಗ ಅವಳ ಮನಸ್ಸಿನಲ್ಲಿ ಗುಡಿಗೋಪುರಗಳನ್ನು ಕಟ್ಟಿಸಬೇಕೆಂಬ ಭಾವನೆಗಳು ಬರುತ್ತಿದ್ದವು. ಗರ್ಭಿಣಿಯಾದರೂ ತೀರ್ಥಕ್ಷೇತ್ರಗಳಿಗೆ ಹೋಗಬೇಕೆಂದು ಅಪೇಕ್ಷಿಸಿದಳು. ಅಂಬಣ್ಣನವರು ಪತ್ನಿಯ ಉತ್ತಮ ಬಯಕೆಗಳಿಂದ ತೃಪ್ತ ರಾದರು.

" ಕ್ಷೇತ್ರ ತೀರ್ಥಗಳ ಯಾತ್ರೆಯ ಮಾಡುತ
ಪಾತ್ರಾಪಾತ್ರರ ತಿಳಿಯುತಲಿ
ಗೋತ್ರಧರನ ಈ ಗಾತ್ರದಿ ತಿಳಿದು
ನೇತ್ರದಿ ಶ್ರೀಹರಿ ಮೂರ್ತಿಯ ನೋಡೋದೆ "

ಎಂಬ ದಾಸರ ವಚನದಂತೆ ಅಂಬಣ್ಣನವರು ಸಜ್ಜನರಿಂದ ಕೂಡಿ ಪತ್ನೀಸಮೇತ ರಾಗಿ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು. ಬಿಂಬಾಭಿನ್ನನಾದ ಶ್ರೀಹರಿಯನ್ನು ಆ ಆ ಕ್ಷೇತ್ರಮೂರ್ತಿಯಲ್ಲಿ ಧ್ಯಾನಿಸಿದರು.

ಕ್ರಿ. ಶ. 1687 ಪ್ರಭವನಾಮ ಸಂವತ್ಸರದಲ್ಲಿ ಒಂದಾನೊಂದು ಶುಭ ಮುಹೂರ್ತದಲ್ಲಿ ಲಕ್ಷ್ಮಮ್ಮ ಗಂಡು ಮಗುವಿಗೆ ಜನ್ಮವಿತ್ತಳು. ಮುದ್ದಾದ ಮುಖದಿಂದೊಪ್ಪುವ ಆ ಕೂಸಿನ ಮೈಬಣ್ಣ ಇವನು ಕೃಷ್ಣಭಕ್ತನೆಂದು ಸಾರುತ್ತಿತ್ತು.

"ದ್ವಾದಶೀ ಅಹನಿ ಪಿತನಾಮ ಕುರ್ಯಾತ್" ಎಂಬ ನಿಯಮದಂತೆ ಅಂಬಣ್ಣನವರು ತಮ್ಮ ಮುದ್ದಿನ ಮಗನಿಗೆ "ರಂಗ" ಎಂದು ಹೆಸರಿಟ್ಟರು. ಅಂದಿನ ಸಮಾಜದ ಮಹಿಳೆಯರೆಲ್ಲರೂ ತಮ್ಮ ತಮ್ಮ ಮಕ್ಕಳ ಆಟಪಾಟಗಳಲ್ಲಿ ಕೃಷ್ಣನ ಲೀಲೆಗಳನ್ನು ಕಾಣುತ್ತಿದ್ದರು. ಲಕ್ಷ್ಮಮ್ಮನು ಸಹ ಸತತ ದಾಸರ ಹಾಡುಗಳನ್ನೇ ಹೇಳುತ್ತಾ ಮಗುವಿನ ಆರೈಕೆಯನ್ನು ಮಾಡುತ್ತಿದ್ದಳು.

"ಬಣ್ಣಿಸಿ ಗೋಪೀ ಹರಸಿದಳು
ಎಣ್ಣೆಯನೊತ್ತುತ ಯದುಕುಲ ತಿಲಕಗೆ"

ಎಂಬ ಹಾಡಿನಿಂದ ಕೂಸಿಗೆ ಎಣ್ಣೆಯನೊತ್ತಿದರೆ, "ಹಾಲು ಕೊಡಮ್ಮ ಬಾಲ ಕೃಷ್ಣಗೆ" ಎಂದು ಹೇಳುತ್ತಾ ಹಾಲು ಕುಡಿಸುತ್ತಿದ್ದಳು. "ಎಂಥಾ ಪಾಪಿ ದೃಷ್ಟಿ ತಾಕಿತೋ ಗೋಪಾಲಕೃಷ್ಣಗೆ" ಎಂದು ಹಾಡುತ್ತಾ ರಂಗನಿಗೆ ಲಕ್ಷ್ಮಮ್ಮ ದೃಷ್ಟಿ ತೆಗೆಯುತ್ತಿದ್ದಳು. "ತೂಗಿರೆ ತೂಗಿರೆ ತೂಗಿರೆ ತೊಟ್ಟಿಲ ನಾಡೈಸ್ವಾಮಿ, ನೀಲವರ್ಣನೆ ಬಾಲಕೃಷ್ಣನೆ ತೊಟ್ಟಿಲನಾಡೈ" ಎಂದು ಹಾಡುತ್ತಾ ತೊಟ್ಟಿಲನ್ನಾಡಿಸಿ, "ಆಡಿಸಿದಳೆಶೋದ, ಜಗದೋದ್ಧಾರನ" ಎಂಬ ಕೃತಿಯಿಂದ ಮಗನನ್ನು ಮುದ್ದಿಸಿ ಮಲಗಿಸುತ್ತಿದ್ದಳು.

ಒಟ್ಟಿನಲ್ಲಿ ಲಕ್ಷ್ಮಮ್ಮ ತನ್ನ ಮಗನಿಗೆ ಹಾಲಿನೊಟ್ಟಿಗೆ ಭಗವದ್‌ಜ್ಞಾನಾಮೃತವನ್ನು ಸಹ ಉಣಿಸಿದಳು. ಪ್ರಹ್ಲಾದನಂತೆ ರಂಗನೂ ಸಹ ತೊಟ್ಟಿಲಿನಲ್ಲೇ ಭಗವದ್ಭಕ್ತನಾದನು.

ಅಂಬಣ್ಣನವರು ತಮ್ಮ ಮಗನಿಗೆ ವಯಸ್ಸಿಗೆ ತಕ್ಕಂತೆ ಅನ್ನಪ್ರಾಶನ, ಚೌಲ, ಅಕ್ಷರಾಭ್ಯಾಸ, ಉಪನಯನಾದಿಗಳನ್ನು ಮಾಡಿದರು. ರಂಗನು ತನ್ನ ಬಾಲ್ಯದಲ್ಲೇ "ಕೌಮಾರೇ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ"

ಎಂಬ ಪ್ರಹ್ಲಾದರ ಉಪದೇಶವನ್ನು ಅನುಷ್ಠಾನಕ್ಕೆ ತಂದನು. ರಂಗನು ಎಲ್ಲ ಮಕ್ಕಳಂತೆ ಆಟಪಾಟಗಳಲ್ಲಿ ತೊಡಗದೆ ನಾರಾಯಣನಲ್ಲಿ ಮನವಿರಿಸಿದವನಾಗಿ ಏಕಾಂತವನ್ನೇ ಬಯಸುತ್ತಿದ್ದನು. ಒಬ್ಬೊಂಟಿಗನಾಗಿ ಕುಳಿತ ರಂಗನು ಒಮ್ಮೆ ಇದ್ದಕ್ಕಿದ್ದಂತೆ ಅಳುವನು, ಮತ್ತೊಮ್ಮೆ ನಗುವನು. ಮಗದೊಮ್ಮೆ ಹಾರಿ ಚೀರಿ ಬೊಬ್ಬಿಡುತ್ತಾ ಕುಣಿಯುವನು. ಇದನು ಕಂಡ ಹುಡುಗರು ಹುಚ್ಚುರಂಗ ಎಂದು ಕರೆಯುತ್ತಿದ್ದರು. ನಿಜವಾಗಿಯೂ ರಂಗನು ಹುಚ್ಚನಾಗಿದ್ದನು. ಅವನಿಗೆ ಭಗವಂತನ ಹುಚ್ಚು ಹಿಡಿದಿತ್ತು. ಸದಾ ಅಂತರ್ಮುಖನಾಗಿ ಭಗವಧ್ಯಾನಾ ಸಕ್ತನಾದ ರಂಗನ ನಡೆನುಡಿಗಳು ಲೋಕವಿಲಕ್ಷಣವಾಗಿದ್ದವು.

ರಂಗನ ಸಾಧನೆ ಪಕ್ವ ದೆಶೆಗೆ ಬಂದಿತ್ತು. ಭಗವದನುಗ್ರಹ ಪ್ರಾಪ್ತಿ ಸಮಯವು ಆಸನ್ನವಾಯಿತು. ಒಮ್ಮೆ ರಂಗನು ತಂದೆತಾಯಿಗಳಿಗೆ ಹೇಳದೆ ತೋವಿ ಎಂಬ ಗ್ರಾಮಕ್ಕೆ ಹೊರಟನು. ಈ ಗ್ರಾಮ ಕೌತಾಳದಿಂದ 6 ಮೈಲಿ ದೂರವಿದ್ದಿದೆ. ಭಗವಚ್ಚಿಂತನೆಯಲ್ಲಿ ನಡೆಯುತ್ತಿದ್ದ ರಂಗನಿಗೆ ಹಿಂದಿನಿಂದ ಗೆಜ್ಜೆಗಳ ಶಬ್ದ ಕೇಳಿ ಬಂತು. ಹಿಂತಿರುಗಿ ನೋಡಲು ಯಾರೂ ಕಾಣಿಸಲಿಲ್ಲ. ರಂಗನು ಪುನಃ ಮುಂದೆ ಸಾಗಿದ. ಹಿಂದಿನಂತೆ ಕಾಲಿಗೆ ಗೆಜ್ಜೆ ಕಟ್ಟಿ ಯಾರೋ ನಡೆದು ಬರುವಂತೆ ಭಾಸವಾಯಿತು.

" ಒಡಲ ನೆಳಲಂದದಲಿ ಹರಿ ನ
ಮ್ಮೊಡನೆ ತಿರುಗುವನೊಂದರೆಕ್ಷಣ
ಬಿಡದೆ ಬೆಂಬಲಿಗನಾಗಿ ಭಕ್ತಾಧೀನನೆಂದೆನಿಪ "

ಅನುಭಾವಿ ಹರಿದಾಸರ ವಾಣಿ ಸತ್ಯ. ಹಿಂದೆ, ಮುಂದೆ, ಎಡ, ಬಲಗಳಲ್ಲಿ ಇಂದಿರೇಶನು ಭಕ್ತರನ್ನನುಸರಿಸುವನು "ವೈಕುಂಠಂವಾ ಪರಿತ್ಯಕ್ಷೆ ನ ಭಕ್ತಾನ್ ತ್ಯಕ್ತುಮುತ್ಸಹೇ" "ವೈಕುಂಠವನ್ನಾದರೂ ಬಿಡುವೆನು, ಭಕ್ತರನೆಂದೆಂದೂ ಬಿಡಲಾರೆ" ಎಂದಲ್ಲವೇ ಭಗವಂತನ ಆಶ್ವಾಸನ. ಬಾಲ ರಂಗನ ಭಕ್ತಿಗೆ ಮೆಚ್ಚಿದ ಭಗವಂತನು ಅವನ ಹಿಂದೆ ಹಿಂದೆ ನಡೆದು ಬಂದ. ಆದೇ ಸಮಯಕ್ಕೆ ರಂಗನಿಗೆ ನೀರಡಿಕೆಯಾಯಿತು. ರಂಗನು ಹಳ್ಳದಲ್ಲಿಳಿದು ನೀರಿಗಾಗಿ ಚಿಲುಮೆ ತೋಡಿದನು. ರಂಗನ ಪರೀಕ್ಷೆಗಾಗಿ ಶ್ರೀನಿವಾಸನು ಶೂದ್ರನ ವೇಷದಲ್ಲಿ ಬಂದು

ಚಿಲುಮೆಯನ್ನು ಕೆಡಿಸಿದನು. ಭಕ್ತರೊಡನೆ ಆಡುವುದು ಭಗವಂತನಿಗೆ ಬಲು ಆನಂದ. "ಮಮ ಮಾಯಾ ದುರತ್ಯಯಾ" ಇದು ಗೀತಾಚಾರ್ಯನ ನುಡಿ. ಇದಕ್ಕೆ ವ್ಯಾಖ್ಯಾನ "ಇವನ ಮಾಯವ ಗೆಲುವನಾವನು ಈ ಜಗತ್ರಯದಿ" ಎಂಬ ಹರಿದಾಸರ ನುಡಿಮುತ್ತು. ರಂಗನು ಭಗವಂತನ ಮಾಯೆಗೆ ಒಳಗಾದನು. ಕಣ್ಣು ಮುಂದೆ ಬಂದು ನಿಂತ ಆತ್ಮಬಂಧುವನ್ನು ಅರಿಯುದಾದನು. ರಂಗನು ಚಿಲುಮೆಯನ್ನು ತೋಡುವುದು, ಭಗವಂತನು ಅದನ್ನು ಕೆಡಿಸುವುದು, ಹೀಗೆ ಸಾಗಿತು ಭಕ್ತ ಮತ್ತು ಭಗವಂತನ ಮಧ್ಯದಲ್ಲಿ ವ್ಯವಹಾರ

ಕೊನೆಗೆ ತಡೆಯಲಾರದೆ ರಂಗನು " ಏನಯ್ಯಾ, ಈ ನಿನ್ನ ಕೆಲಸ ? " ಎಂದನು. ಆಗ ಕಪಟನಾಟಕ ಸೂತ್ರಧಾರಿ ಮುಗುಳ್ನಗೆ ನಕ್ಕು "ರಂಗಾ ! ನಿನಗಾಗಿರುವ ಬಾಯಾರಿಕೆ ಆಧ್ಯಾತ್ಮ ಬಾಯಾರಿಕೆ ; ಈ ಬಾಯಾರಿಕೆ ಶಾಶ್ವತ ವಾಗಿ ಹಿಂಗಲು ಆಧ್ಯಾತ್ಮಜ್ಞಾನದ ನೀರು ಬೇಕು" ಎಂದನು. ಈ ಮಾತುಗಳಿಂದ ರಂಗನ ಅಂತರಂಗ ದೃಷ್ಟಿಯು ತೆರೆಯಿತು. ತನ್ನೆದುರಿನಲ್ಲಿ ನಿಂತ ಲಕುಮಿ ವಲ್ಲಭನ ಅರಿವು ರಂಗನಿಗಾಯಿತು. ಆನಂದಬಾಷ್ಪಗಳು ಧಾರಾಕಾರವಾಗಿ ಸುರಿ ದವು. ಕಂಠವು ತದ್ಗದಿತವಾಯಿತು. ಆಗ ರಂಗನು "ಪ್ರಭೋ! ದೀನ ಬಂಧೋ ! ತೊಂಡರಿಗೆ ತೊಂಡನೆನಿಸುವ ಕಡು ಕರುಣಾಮಯಿ ಜಗ ನ್ನಾಥಾ ! ನನ್ನನ್ನು ಉದ್ಧರಿಸಲು ಬಂದೆಯಾ ? " ಎಂದು ಸಾಷ್ಟಾಂಗವೆರಗಿ ದನು. ಪರಾತ್ಪರನು ವೆಂಕಟೇಶನ ರೂಪದಲ್ಲಿ ರಂಗನಿಗೆ ಕಾಣಿಸಿಕೊಂಡನು. ತನ್ನ ಅಭಯಹಸ್ತವನ್ನು ಬಾಲಕನ ತಲೆಯ ಮೇಲಿರಿಸಿ, ನಾಲಿಗೆಯ ಮೇಲೆ ಬೀಜಾ ಕ್ಷರವನ್ನು ಬರೆದನು. ರಂಗನ ಜೀವನದಲ್ಲಿ ನೂತನಾಧ್ಯಾಯವು ಪ್ರಾರಂಭ ವಾಯಿತು. ಅವನ ಹೃದಯದಲ್ಲಿ ಜ್ಞಾನಜ್ಯೋತಿಯು ಪ್ರಕಾಶಿಸಿತು. ಎಲ್ಲೆಡೆ ಯಲ್ಲೂ ಭಗವಂತನ ಸುಂದರ ಮಂಗಳ ವಿಗ್ರಹದ ಸಂದರ್ಶನವಾಯಿತು. ಹೃದ ಯಾಂತರ್ಯಾಮಿಯಾದ ಬಿಂಬನು ಪ್ರಕಾಶಿಸಿದನು. ಮುಂದೆ ನಿಂತ ಶ್ರೀನಿ ವಾಸನು ಅದೃಶ್ಯನಾದನು. ಬಾಹ್ಯಪ್ರಪಂಚವನ್ನು ಮರೆತ ರಂಗನಿಗೆ ಸಮಯವೇ ತಿಳಿಯದಾಯಿತು. ಕಣ್ಣು ಬಿಟ್ಟಾಗ ಸಾಯಂಕಾಲವಾಯಿತ್ತು. ರಂಗನಿಗೆ ಹಸಿವೆ ನೀರಡಿಕೆಗಳ ಪರಿವೆಯೇ ಇರಲಿಲ್ಲ. ಭಗವದಾಯತ್ತಚಿತ್ತರಾದ ಜ್ಞಾನಿ

ಗಳ ವ್ಯವಹಾರವೇ ಹೀಗೆ. ದಶಮಸ್ಕಂಧದ ಪ್ರಾರಂಭದಲ್ಲಿ ಸ್ವತಃ ಪರೀಕ್ಷಿದ್ರಾಜನೇ ಈ ವಿಷಯುವನ್ನು ಸ್ಪಷ್ಟಪಡಿಸಿರುವನು.

" ನೈಷಾತಿದುಸ್ಸಹಾ ಕ್ಷುನ್ಮಾಂ
ತ್ಯಕ್ತೋದಮಪಿ ಬಾಧತೆ
ಪಿಬಂತಂ ತ್ವನ್ಮುಖಾಂಭೋಜ
ನ್ಯುತಂ ಹರಿಕಥಾಮೃತಂ "

ಶುಕಾಚಾರ್ಯರೇ ! ನಿಮ್ಮ ಮುಖ ಕಮಲದಿಂದ ಹೊರಹೊಮ್ಮುತ್ತಿರುವ ಹರಿಕಥಾಮೃತವನ್ನು ಪಾನಮಾಡುತ್ತಿರುವ ನನಗೆ ಹಸಿವೆ ನೀರಡಿಕೆಗಳು ಬಾಧಿಸುತ್ತಿಲ್ಲ. ರಂಗನು ಭಗವಂತನನ್ನು ಸ್ಮರಿಸುತ್ತಾ ಮನೆಯನ್ನು ಸೇರಿದನು.

ಒಮ್ಮೆ ಲಕ್ಷ್ಮಕ್ಕನು ಬಂಧುಮಿತ್ರರಿಂದ ಕೂಡಿ ತಿರುಪತಿ ಯಾತ್ರೆಗೆ ಹೊರಟಳು. ಹುಚ್ಚನಂತಿರುವ ತನ್ನ ಮಗನನ್ನು ಶ್ರೀನಿವಾಸನ ಸನ್ನಿಧಿಗೆ ಕರೆದೊಯ್ಯಲು ತೀರ್ಮಾನಿಸಿದಳು ಶ್ರೀನಿವಾಸನ ದರ್ಶನದಿಂದ ಮಗನ ಮಾಂದ್ಯವು ತೊಲಗೀತೆಂದು ತಾಯಿಯ ಬಯಕೆ. ಅಂಬಣ್ಣನೂ ಸಹ ಆದಕ್ಕೆ ಒಪ್ಪಿದನು. "ಕಂಡ ಕಂಡಲ್ಲಿ ವಿಶ್ವರೂಪ ಕಾಂಬುವರೋ" ಎಂಬ ದಾಸರ ವಚನದಂತೆ ರಂಗನಿಗೆ ಸರ್ವವೂ ಶ್ರೀನಿವಾಸನಮಯವಾಗಿತ್ತು. ತಾಯಿಯೊಡನೆ ವೆಂಕಟಾದ್ರಿಗೆ ಪ್ರಯಾಣ ಬೆಳೆಸಿದ. ಸುಮಾರು ಹದಿನೈದು ದಿನಗಳು ಕಾಲ್ನಡಿಗೆಯಲ್ಲಿ ಪ್ರಯಾಣಮಾಡಿ ವಿಜಯದಶಮಿಗೆ ಸರಿಯಾಗಿ ಎಲ್ಲರೂ ತಿರುಪತಿಯನ್ನು ಸೇರಿದರು. ಭೂವೈಕುಂಠಪತಿಯಾದ ವೆಂಕಟೇಶನ ದರ್ಶನದಿಂದ ರಂಗನು ಪುಲಕಿತಗಾತ್ರನಾದ. ಕಾಲಿಗೆ ಗೆಜ್ಜೆಕಟ್ಟಿ ಕೈಯಲ್ಲಿ ತಾಳ ಹಿಡಿದು ಆನಂದಬಾಷ್ಪಗಳನ್ನು ಸುರಿಸುತ್ತಾ, ಅರ್ಭಟಿಸಿ, ಮನಮುಟ್ಟಿ ಹಾಡುತ್ತಿರುವ ಹರಿದಾಸರ ಗುಂಪಿನಲ್ಲಿ ರಂಗ ಬೆರೆತುಹೋದ. ಗೋವಿಂದನ ನಾಮವನ್ನು ಮೈಮರೆತು ಹಾಡಿದ. ಎಲ್ಲ ಹರಿದಾಸರ ಹೃದಯಗಳಲ್ಲೂ ಶ್ರೀನಿವಾಸನನ್ನು ಕಂಡು ಹಿರಿ ಹಿರಿ ಹಿಗ್ಗಿದ. ಲಕ್ಷ್ಮಕ್ಕ ಹಾಗೂ ಬಂಧುಮಿತ್ರರು ಮಗನನ್ನು ಮರೆತರು. ಅಂದಿನ ರಾತ್ರಿ ಭಕ್ತಬಂಧು ಶ್ರೀನಿವಾಸ ರಂಗನಿಗೆ ಕಾಣಿಸಿಕೊಂಡು "ನೀನಿದ್ದಲ್ಲೇ ನಾನಿರುವೆನಲ್ಲಾ? ಇಲ್ಲಿಗೇಕೆ ಬಂದೆ ? " ಎಂದು ಪ್ರಶ್ನಿಸಿದ.

ಅದಕ್ಕೆ ರಂಗನು "ಪ್ರಭೋ! ಹೇ ಸರ್ವತ್ರವ್ಯಾಪ್ತಿ! ನಿನ್ನನ್ನು ಎಲ್ಲೆಡೆಯಲ್ಲೂ ಕಾಣಬಹುದು; ನಿನ್ನ ಭಕ್ತರ ದರ್ಶನ ಸುಲಭವೇ? ಈ ನಿನ್ನ ದಿವ್ಯ ಸನ್ನಿಧಿಯಲ್ಲಿ ಹರಿದಾಸರ ಗುಂಪಿನ ದರ್ಶನವೇ ಆಯಿತಲ್ಲಾ" ಎಂದನು. ಆಗ ಶ್ರೀನಿವಾಸನು "ರಂಗಾ! ನೀನು ಮಾಡಬೇಕಾದ ಕಾರ್ಯಗಳು ಬಹಳ ಇವೆ. ಅವನ್ನು ಸಾಧಿಸು" ಎಂದನು. ಭಗವದಾಜ್ಞೆಯನ್ನು ಶಿರಸಾಧರಿಸಿದ ರಂಗನು ಅಲ್ಲಿಂದ ಹೊರಟು ಒಂದೇ ಕ್ಷಣದಲ್ಲಿ ಕೌತಾಳಕ್ಕೆ ಬಂದನು. ಬಾಗಿಲಿನಲ್ಲಿ ಬಂದು ನಿಂತ ರಂಗನನ್ನು ಕಂಡ ಅಣ್ಣ ವೆಂಕಪ್ಪ "ಏನೋ ತಿರುಪತಿಗೆ ಹೋಗಲಿಲ್ಲವೇ? ಅಮ್ಮ ಎಲ್ಲಿ?" ಎಂದು ಕೇಳಿದ. ಅದಕ್ಕೆ ರಂಗನು "ತಿರುಪತಿಯಲ್ಲಿ ಶ್ರೀನಿವಾಸನ ಸೇವೆಯಲ್ಲಿದ್ದಾಳೆ. ನಾನು ಮಾತ್ರ ಬಂದುಬಿಟ್ಟೆ" ಎಂದನು. ಅಂಬಣ್ಣನವರು ರಂಗನಿಗೆ ಸುಜ್ಞಾನವನ್ನು ಕರುಣಿಸೆಂದು ಭಗವಂತನನ್ನು ಪ್ರಾರ್ಥಿಸಿ ಸುಮ್ಮನಾಗಿಬಿಟ್ಟರು.

ಇತ್ತ ಲಕ್ಷ್ಮಮ್ಮ ಹಾಗೂ ಬಂಧುಮಿತ್ರರು ಬ್ರಹ್ಮೋತ್ಸವವನ್ನು ಮುಗಿಸಿಕೊಂಡು ರಂಗಯ್ಯನೊಡನೆ ಮರಳಿ ಬಂದರು. ಬಂದ ತಾಯಿಯೊಡನೆ ಮಗ ವೆಂಕಪ್ಪನು "ಅಮ್ಮಾ, ರಂಗ ವಿಜಯದಶಮಿಯ ರಾತ್ರಿಯೇ ಇಲ್ಲಿಗೆ ಬಂದುಬಿಟ್ಟ; ಅವನಿಗಾಗಿ ನೀವು ಅಲ್ಲಿ ಎಷ್ಟು ಕಷ್ಟಪಟ್ಟಿರೋ ಏನೋ?" ಎಂದ. ಲಕ್ಷ್ಮಮ್ಮನಿಗೆ ಆಶ್ಚರ್ಯವಾಯಿತು. ಅವಳು ಗಂಡನನ್ನು ಕುರಿತು "ಏನ್ರೀ, ನಿಮ್ಮ ಹಿರೇ ಮಗ ಹೀಗೆ ಹೇಳುತ್ತಿದ್ದಾನೆ. ರಂಗ ನಮ್ಮ ಹತ್ತಿರವೇ ಇದ್ದ. ಈ ಸಲದ ನಮ್ಮ ಯಾತ್ರೆ ಬಹಳ ಆನಂದದಾಯಕವಾಗಿತ್ತು. ಈಗ ತಾನೆ ನಾವೆಲ್ಲರೂ ಕಲೆತು ಬರುತ್ತಿದ್ದೇವೆ" ಎಂದಳು. ಅಂಬಣ್ಣನವರಿಗೂ ಆಶ್ಚರ್ಯವೆನಿಸಿತು. ದಶಮಿಯ ರಾತ್ರಿ ಕೌತಾಳಕ್ಕೆ ಬಂದ ರಂಗ ತಮ್ಮ ಹತ್ತಿರವೇ ಇದ್ದಾನೆ. ಹೀಗಿರುವಾಗ! ತಿರುಮಲೆಯಲ್ಲಿ ರಂಗನೆ! ಇದು ಹೇಗೆ ತಾನೆ ಸಾಧ್ಯ! ಹೀಗೆ ಅನೇಕ ಆಲೋಚನೆಗಳು ಅಂಬಣ್ಣನವರ ತಲೆಯಲ್ಲಿ ಹಾದು ಹೋದವು. ಅವರು ರಂಗನ ಹತ್ತಿರ ಬಂದು "ರಂಗಾ! ನೀನು ನಿಜವಾಗಿಯೂ ನೀನು ಎಲ್ಲಿ ಇದ್ದೆ?" ಎಂದು ಕೇಳಿದರು. ಆಗ ರಂಗನು "ಶ್ರೀನಿವಾಸನ ದಯದಿಂದ ನಾನು ಎರಡು ಕಡೆಗಳಲ್ಲೂ ಇದ್ದೆ" ಎಂದು ಹೇಳಿ ತಕ್ಷಣ ಅಲ್ಲಿಂದ ಹೊರಟು ಹೋದನು. ಈ ವಿಷಯ ಊರಿನ ಜನರಿಗೆಲ್ಲಾ ತಿಳಿಯಿತು. ಎಲ್ಲರೂ ರಂಗ ಬೂದಿ ಮುಚ್ಚಿದ ಕೆಂಡದಂತೆ ಗುಪ್ತ ಸಾಧಕನೆಂದು ತಿಳಿದರು. ಅಂದಿನಿಂದ ರಂಗ ರಂಗಯ್ಯನವರಾದ; ಅಯ್ಯನವರಾದ.

ಜನರು ಬಂದು ತಮ್ಮ ಕಷ್ಟಗಳನ್ನು ರಂಗಯ್ಯನವರಿಗೆ ಹೇಳಿಕೊಳ್ಳುತ್ತಿದ್ದರು. ರಂಗಯ್ಯನವರು ಬಂದ ಜನರ ಯೋಗ್ಯತೆಯನ್ನರಿತು, ಅವರ ಕಷ್ಟಕ್ಕೆ ಪರಿಹಾರ ಸೂಚಿಸುತ್ತಿದ್ದರು. ರಂಗಯ್ಯನವರ ಸ್ಪರ್ಶಮಾತ್ರದಿಂದ ಕೆಲವರ ರೋಗಗಳು ಪರಿಹಾರವಾದವು. ಆ ಹಳ್ಳಿಯ ಜನರಿಗೆ ರಂಗಯ್ಯನವರು ಪ್ರತ್ಯಕ್ಷ ದೈವವಾದರು.

ಕೆಲವು ಜೀವಿಗಳಿಗೆ ರಂಗಯ್ಯನವರ ತತ್ತ್ವೋಪದೇಶವೂ ದೊರೆಯಿತು. ರಂಗಯ್ಯನವರ ಪೂರ್ಣ ಅನುಗ್ರಹಕ್ಕೆ ಪಾತ್ರನಾದವನು ಚನ್ನಯ್ಯನು. ಚನ್ನಯ್ಯನಲ್ಲಿ ರಂಗಯ್ಯನವರಿಗೆ ಎಲ್ಲಿಲ್ಲದ ಅಭಿಮಾನ. ಚನ್ನಯ್ಯಗೆ ರಂಗಯ್ಯನವರಲ್ಲಿ ವಿಶೇಷವಾದ ಭಕ್ತಿ. ಅವರನ್ನು ಬಿಟ್ಟು ಒಂದು ಕ್ಷಣವೂ ಇರುತ್ತಿರಲಿಲ್ಲ. ಹೆಚ್ಚಿನ ಸಮಯವನ್ನು ರಂಗಯ್ಯನವರ ತತ್ತ್ವೋಪದೇಶ ಶ್ರವಣದಲ್ಲೂ, ಅವರ ಪಾದಸೇವೆಯಲ್ಲೂ ಕಳೆಯುತ್ತಿದ್ದನು. "ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ" ಮಹಾತ್ಮರ ಸೇವೆಯೇ ಮುಕ್ತಿಗೆ ಕಾರಣ.

ಕೌತಾಳದಿಂದ ನಾಲ್ಕು ಮೈಲಿಗಳ ದೂರದಲ್ಲಿದೆ ಚಿರುತಾಪಲ್ಲಿ ಎಂಬ ಗ್ರಾಮ. ಆ ಗ್ರಾಮದಲ್ಲಿ ಕುಡಿಯುವ ನೀರಿನ ಭಾವಿಯೇ ಇರಲಿಲ್ಲ. ನೀರಿಗಾಗಿ ಜನರು ಬಹಳ ಕಷ್ಟಪಡುತ್ತಿದ್ದರು. ಗ್ರಾಮದ ಜನರು ರಂಗಯ್ಯನವರನ್ನು ಶರಣು ಹೊಂದಿದರು. ಜನರ ಕಷ್ಟವನ್ನು ಕಂಡು ರಂಗಯ್ಯನವರ ಮನ ಕರುಗಿತು. ರಂಗಯ್ಯನವರು ಆ ಜನರ ಹಿಂದೆ ಚಿರುತಾಪಲ್ಲಿಗೆ ನಡೆದರು. ಗ್ರಾಮದ ಜನರಿಗೆ ಋಷ್ಯಶೃಂಗನೇ ತಮ್ಮ ಗ್ರಾಮಕ್ಕೆ ನಡೆದು ಬಂದಂತೆ ಭಾಸವಾಯಿತು. ರಂಗಯ್ಯನವರು ನೀರಿಗೆ ಆಶ್ರಯನಾದ ನಾರಾಯಣನನ್ನು ಸ್ಮರಿಸಿದರು. ಜನರಿಗೆ ಆಶ್ವಾಸನೆಯನಿತ್ತರು. ಭಗವಂತನನ್ನು ಪ್ರಾರ್ಥಿಸಿ ಒಂದು ಸ್ಥಳವನ್ನು ತೋರಿಸಿ ದೊಡ್ಡ ಭಾವಿ ತೋಡುವಂತೆ ಹೇಳಿದರು. ಆ ಕ್ಷಣದಲ್ಲೇ ಎಲ್ಲರೂ ಅಯ್ಯನವರ ಪಾದಗಳಿಗೆ ವಂದಿಸಿ ಭಾವಿ ತೋಡಲು ಪ್ರಾರಂಭಿಸಿದರು. ಕೆಲವೇ ದಿನಗಳಲ್ಲಿ ಅತಿ ವಿಶಾಲವೂ, ಆಳವೂ ಆದ ಭಾವಿಯನ್ನು ತೋಡಿದರು. ಆದಾದ ಭಗವತ್ಸಂಕಲ್ಪವೋ ಭಾವಿಯ ಆಡಿಯಲ್ಲಿ ಒಂದು ದೊಡ್ಡ ಬಂಡೆ ಕಾಣಿಸಿಕೊಂಡಿತು. ಎಲ್ಲರ ಹೃದಯದಲ್ಲೂ ಬಂಡೆ ಬಿದ್ದಂತಾಯಿತು. ರಂಗಯ್ಯನವರ ಅನುಗ್ರಹದಿಂದ ಗಂಗೆ ತಮ್ಮ ಊರಿನಲ್ಲಿ ಹರಿದು ಬರುವಳೆಂದು ಭಾವಿಸಿದ್ದ ಜನರ ಹೃದಯದಲ್ಲಿ ಭೀತಿಯು ಆವರಿಸಿ ನಿಂತಿತು.

ಎಲ್ಲರೂ ಅಯ್ಯನವರಲ್ಲಿಗೆ ಓಡಿ ಬಂದರು. ವಿಷಯವನ್ನು ತಿಳಿಸಿ ರಕ್ಷಿಸ ಬೇಕೆಂದು ಮೊರೆಯಿಟ್ಟರು. ಶಾಂತಚಿತ್ತರಾದ ರಂಗಯ್ಯನವರು "ಭಕ್ತಬಂಧು ವಾದ ಶ್ರೀಹರಿ ನಿಮ್ಮನ್ನು ಎಂದಿಗೂ ಕೈಬಿಡಲಾರ ; ನಂಬಿ ಕೆಟ್ಟವರಿಲ್ಲವೋ ರಂಗಯ್ಯನ, ನಂಬದೆ ಕೆಟ್ಟರಿ ಕೆಡಲಿ–ಇದು ಹರಿದಾಸರು ನಮಗೆ ನೀಡಿದ ಅಭಯ ; ಭೀತರಾಗಬೇಡಿ" ಎಂದು ಹೇಳಿ ಎಲ್ಲರನ್ನೂ ಸಮಾಧಾನಪಡಿಸಿ ದರು. ಭಾವಿಗೆ ಕಟ್ಟಡವನ್ನು ಕಟ್ಟುವಂತೆ ಹೇಳಿ, ಒಂದು ಶುಭಮುಹೂರ್ತ ವನ್ನು ನಿರ್ಣಯಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿರೆಂದು ಹೇಳಿದರು.

ಗ್ರಾಮದ ಜನರು ರಂಗಯ್ಯನವರ ಆದೇಶದಂತೆ ಭಾವಿಗೆ ಕಟ್ಟಡವನ್ನು ಕಟ್ಟಿಸಿದರು. ನೀರಿಗೆ ಕ್ಷಾಮವಿದ್ದರೂ ಬ್ರಾಹ್ಮಣ ಸಂತರ್ಪಣೆಗೆ ಸಿದ್ಧತೆಗಳನ್ನು ಮಾಡಿದರು. ಅಯ್ಯನವರು ಸರಿಯಾದ ಸಮಯಕ್ಕೆ ಬಂದು ಸ್ನಾನ ಮಾಡಿ, ಭಾವಿಯಲ್ಲಿಳಿದು ಧ್ಯಾನಾಸಕ್ತರಾಗಿ ಕುಳಿತರು. ಮತ್ಸ್ಯ ಸಾಲಿಗ್ರಾಮವನ್ನು ಭಾವಿ ಅಡಿಯಲ್ಲಿ ಸ್ಥಾಪಿಸಿದರು. ಕೆಲಸಗಾರನನ್ನು ಕರೆದು ಒಂದು ಸ್ಥಳವನ್ನು ತೋರಿಸಿ ಅಲ್ಲಿಯ ಬಂಡೆಯನ್ನು ಒಡೆಸಿದರು. ಹರಿಯ ಅಂಗುಟಾಗ್ರದಿ ಜನಿಸಿದ ಅಮರ ತರಂಗಿಣಿಯು ಭಗೀರಥನಿಗೆ ಒಲಿದು ಧರೆಗಿಳಿದಂತೆ ಗಂಗೆಯು ಪ್ರತ್ಯಕ್ಷಳಾದಳು. ಅಯ್ಯನವರು ಭಾವಿಯಿಂದ ಮೇಲೆ ಬಂದರು. ಬಂಡೆ ಬಿರಿಯಿತು ; ಅಂತರ್ವಾಹಿನಿ ಹೊರಧುಮುಕಿದಳು. ಜನರು ನೋಡುತ್ತಿರುವಂತೆ ಸಿಹಿಯಾದ ನೀರಿನಿಂದ ಭಾವಿ ತುಂಬಿ ತುಳುಕಿತು. ಜನರ ಆಶ್ಚರ್ಯ–ಆನಂದಗಳಿಗೆ ಪಾರವೇಯಿಲ್ಲದಾಯಿತು. ಎಲ್ಲರೂ ಭಕ್ತಿಯ ಭಾವಾ ವೇಶದಿಂದ ರಂಗಯ್ಯನವರನ್ನು ಹಾಡಿಹೊಗಳಿದರು. ಅಯ್ಯನವರು ಮಾತ್ರ ಸರ್ವವನ್ನೂ ಗಂಗಾಜನಕನ ಪಾದಪದ್ಮಗಳಿಗೆ ಅರ್ಪಿಸಿ ನಿರ್ಲಿಪ್ತರಾದರು. ಇಂದಿಗೂ ಆ ಭಾವಿಯ ತಳವನ್ನು ಕಂಡವರಿಲ್ಲ. ಅಂದಿನಿಂದ ಆ ಭಾವಿಯು ಅಯ್ಯನವರ ಭಾವಿಯೆಂದೇ ಪ್ರಸಿದ್ಧವಾಯಿತು.

ಅದು ನವರಾತ್ರಿಯ ಸಮಯ. ಎಲ್ಲರ ಮನೆಗಳಲ್ಲೂ ಶ್ರೀನಿವಾಸನ ಕಲ್ಯಾಣದ ಸಡಗರ. ಭಕ್ತರಿಗಾಗಿ ಮದುವೆ ಹೆಮ್ಮಿಕೊಂಡ ಭೂವೈಕುಂಠಪತಿ ವೆಂಕಟೇಶ ಎಲ್ಲರ ಮನ ಮನೆಗಳಲ್ಲೂ ತಾಂಡವಿಸುತ್ತಿದ್ದ. ಅಯ್ಯನವರ ತಾಯಿ ಲಕ್ಷ್ಮಮ್ಮನವರಿಗೆ [illegible] ತಿರುಮಲೆಗೆ ಹೋಗಿ ಶ್ರೀನಿವಾಸನ ಪ್ರತ್ಯ

ತ್ಸವವನ್ನು ನೋಡಬೇಕೆಂಬ ಅಪೇಕ್ಷೆಯಾಯಿತು. ಪುಣ್ಯಚರಿತನಾದ ಮಗ ನನ್ನು ಹತ್ತಿರ ಕರೆದು ಅಯ್ಯಾ ಬ್ರಹ್ಮೋತ್ಸವವನ್ನು ನೋಡಬೇಕೆಂದು ಆಸೆ ಯಾಗಿದೆ. ಶ್ರೀನಿವಾಸನ ಸನ್ನಿಧಿಗೆ ನನ್ನನ್ನು ಕರೆದೊಯ್ಯಲಾರೆಯಾ ? ಎಂದಳು. ಆಗ ರಂಗಯ್ಯನವರು, ಅಮ್ಮಾ ಶ್ರೀನಿವಾಸ ಭಕ್ತರು ಕರೆದಲ್ಲಿಗೆ ಬರುವ ಕಡು ಕರುಣಾಮಯ ; ಸರ್ವತ್ರವ್ಯಾಪಿ ; ನೋಡಬೇಕೆಂಬ ಹಂಬಲ ವಿದ್ದಲ್ಲಿ ಆ ಸ್ವಾಮಿಯ ವೈಭವವನ್ನು ಎಲ್ಲೆಡೆಯಲ್ಲೂ ಕಾಣಬಹುದು ; ಈ ಸಾಧನ ಶರೀರಕ್ಕೆ ಜನ್ಮವಿತ್ತ ನಿನ್ನ ಅಪೇಕ್ಷೆಯನ್ನು ತಪ್ಪದೆ ನಡೆಸಿಕೊಡುವೆನು" ಎಂದನು.

ತಾಯಿಯನ್ನು ಮನೆಯ ಮೇಲಿನ ಭಾಗಕ್ಕೆ ಕರೆದೊಯ್ದನು. ತಿರುಮಲೆಯ ದಿಕ್ಕಿಗೆ ಕೈಯನ್ನು ತೋರಿಸುತ್ತಾ "ಅಮ್ಮಾ ಅದೋ ನೋಡು ಬ್ರಹ್ಮಾಂಡ ನಾಯಕನಾದ ಶ್ರೀನಿವಾಸನ ಬ್ರಹ್ಮೋತ್ಸವದ ವೈಭವ. ಬಂಗಾರದ ಶಿಖರದಿಂದೊಪ್ಪುವ ಶ್ರೀನಿವಾಸನ ಭವ್ಯಮಂದಿರ. "ಗೋವಿಂದಾ ಗೋವಿಂದಾ" ಎಂದು ಭಜನೆ ಮಾಡುವ ಭಕ್ತವೃಂದ ಎಂದನು. ಲಕ್ಷ್ಮಮ್ಮನಿಗೆ ಶ್ರೀನಿವಾಸನ ದಿವ್ಯದರ್ಶನವಾಯಿತು. ನಿಂತಲ್ಲಿಂದಲೇ ಗರುಡವಾಹನನಾಗಿ ನಾಲ್ಕು ಬೀದಿ ಗಳಲ್ಲಿ ನಡೆದು ಬರುವ ಶ್ರೀನಿವಾಸನ ಸುಂದರ ಮಂಗಳ ವಿಗ್ರಹವನ್ನೂ, ಆ ಸ್ವಾಮಿಯ ಮುಂದೆ ಮೈಮರೆತು ಹಾಡುತ್ತಿರುವ ಹರಿದಾಸರ ವೃಂದವನ್ನೂ ಕಂಡಳು. ಆನಂದಾಶ್ರುಗಳನ್ನು ಸುರಿಸುತ್ತಾ, ಪುಲಕಿತಗಾತ್ರಳಾಗಿ "ಗೋವಿಂದಾ ; ಗೋವಿಂದಾ !" ಎಂದು ಮುಕ್ತಕಂಠದಿಂದ ಕೂಗಿದಳು. ಲಕ್ಷ್ಮಮ್ಮನಿಗೆ ಕಾಲದ ಪರಿವೆಯೇ ಇಲ್ಲದಾಯಿತು. "ಅಮ್ಮಾ, ಶ್ರೀನಿವಾಸನ ದರ್ಶನದಿಂದ ತೃಪ್ತಿಯಾಯಿತೆ ?" ಎಂಬ ಮಗನ ಮಾತಿನಿಂದಲೇ ಲಕ್ಷ್ಮಮ್ಮನಿಗೆ ಎಚ್ಚರ. ಮಗನನ್ನು ಬಿಗಿಯಾಗಿ ಅಪ್ಪಿಕೊಂಡು "ಅಯ್ಯೋ ರಂಗಾ ! ನಿನ್ನನ್ನು ಮಗನನ್ನಾಗಿ ಪಡೆದ ನನ್ನ ಜನ್ಮ ಧನ್ಯವಾಯಿತು" ಎಂದಳು.

ಧೂಳಿಧೂಸರಿತಾಂಗರಾಗಿ, ಸಾಧಾರಣ ವಸ್ತ್ರವನ್ನುಟ್ಟು, ಅಪರಿಚಿತ ವ್ಯಕ್ತಿಗಳಿಗೆ ಮಂದನಂತೆ ತೋರುತ್ತಿರುವ ರಂಗಯ್ಯನವರು ಆಗಾಗ ತೀರ್ಥ ಕ್ಷೇತ್ರಗಳಿಗೆ ಹೋಗುತ್ತಿದ್ದರು.

" ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾ-
ದಧರ್ಮ ಶೀಲಸ್ಯ ಸುದು:ಖಿತಸ್ಯ
ಅನುಗ್ರಹಾಯೈವ ಚರಂತಿ ನೂನಂ
ಭೂತಾನಿ ಭವ್ಯಾನಿ ಜನಾರ್ಧನಸ್ಯ"

ಎಂಬ ಭಾಗವತ ವಚನದಂತೆ ಭಗವಂತನಿಂದ ದೂರವಾಗಿ, ಅಧರ್ಮನಿರತರಾಗಿ ಸಂಸಾರ ದುಃಖದಿಂದ ಬೆಂದು, ನೊಂದ ಜನರನ್ನು ಉದ್ಧರಿಸಲಿಕ್ಕಾಗಿಯೇ ಭಗವದ್ಭಕ್ತರು ಸಂಚರಿಸುತ್ತಾರೆ.

ಒಮ್ಮೆ ರಂಗಯ್ಯನವರು ಅಪ್ತರಿಂದಲೂ, ಪ್ರಿಯ ಶಿಷ್ಯ ಚನ್ನಯ್ಯ ನಿಂದಲೂ ಕೂಡಿ ಯಾತ್ರೆಗೆ ಹೊರಟರು. ಮನೋನಿಯಾಮಕನಾದ ಕಾಶಿ ವಿಶ್ವನಾಥನು ಅವರ ಮನಸ್ಸನ್ನು ಸೆಳೆದನು. ರಂಗಯ್ಯನವರ ಯಾತ್ರೆ ಕಾಶಿ ಯತ್ತ ಸಾಗಿತು. ಗಂಗಾಸ್ನಾನ, ವಿಶ್ವನಾಥನ ದರ್ಶನಾದಿಗಳಿಂದ ಎಲ್ಲರಿಗೂ ಆನಂದವಾಯಿತು. ವಿಶ್ವನಾಥನ ಸನ್ನಿಧಿಯಲ್ಲಿ ಹಲವು ದಿನ ಕಳೆದರು. ವಿಶ್ವನಾಥನು ರಂಗಯ್ಯನವರ ಸೇವೆಯಿಂದ ಪ್ರೀತನಾದ. ಅರುಣೋದಯದಲ್ಲಿ ಗಂಗೆಯಲ್ಲಿ ಸ್ನಾನಮಾಡುತ್ತಿದ್ದ ಅಯ್ಯನವರಿಗೆ ಒಂದು ಶಿವಲಿಂಗವು ದೊರೆ ಯಿತು. ಆ ಲಿಂಗವು ಇಂದಿಗೂ ಅಯ್ಯನವರ ವಂಶೀಕರಲ್ಲಿದೆ. ಕಾಶಿಯಿಂದ ಹೊರಟ ಅಯ್ಯನವರು ಮಾರ್ಗ ಮಧ್ಯದಲ್ಲಿ ಅನೇಕ ಪವಿತ್ರ ಕ್ಷೇತ್ರಗಳನ್ನು ನೋಡುತ್ತಾ, ಕ್ಷೇತ್ರ ಮಹಾತ್ಮೆಯನ್ನು ತಮ್ಮ ಅನುಯಾಯಿಗಳಿಗೆ ತಿಳಿಸುತ್ತಾ ಕರ್ನೂಲಿಗೆ ಬಂದು ಸೇರಿದರು.

ಆ ಸಮಯದಲ್ಲಿ ಕರ್ನೂಲಿನಲ್ಲಿ ಅನಾವೃಷ್ಟಿಯಿಂದಾಗಿ ದುರ್ಭಿಕ್ಷತೆಯು ತಾಂಡವಿಸುತ್ತಿತ್ತು. ಬೆಳೆಗಳಿಲ್ಲದೆ, ನೀರಿಲ್ಲದೆ ಜನರು ಬಹಳ ಕಷ್ಟಕ್ಕೀಡಾಗಿ ದ್ದರು. ನಗರದಲ್ಲಿ ಕೃಷ್ಣರಾಯರೆಂಬುವರು ಗಣ್ಯವ್ಯಕ್ತಿಗಳು. ಆ ಸಮಯದಲ್ಲಿ ಕರ್ನೂಲಿನ ಸಂಸ್ಥಾನಕ್ಕೆ ಅಫೀಜ್‌ಖಾನ್ ನವಾಬನ ಮಂತ್ರಿಗಳು. ರಂಗಯ್ಯನವರ ಮಹಾತ್ಮೆಯನ್ನು ಕೇಳಿ ತಿಳಿದಿದ್ದ ಕೃಷ್ಣರಾಯರು ಭಕ್ತಿಪೂರ್ವಕ ವಾಗಿ ಅಯ್ಯನವರಿಗೆ ಸ್ವಾಗತ ಬಯಸಿದರು. ರಾಯರು ಶ್ರೀನಿವಾಸನ ಪರಮ ಭಕ್ತರೆನಿಸಿದ ಅಯ್ಯನವರನ್ನು ರಾಜಮರ್ಯಾದೆಯಿಂದ ತಮ್ಮ ಮನೆಗೆ ಕರೆದುಕೊಂಡು ಹೋದರು. ಊರಿನ ಎಲ್ಲಾ ಗೃಹಸ್ಥರು ಅಯ್ಯನವರ

ಮೆರವಣಿಗೆಯಲ್ಲಿ ಭಾಗವಹಿಸಿದರು. ಅಯ್ಯನವರ ಮೆರವಣಿಗೆ ಮುಸಲ್ಮಾನರ ಮಸೀದಿಯ ಮುಂದೆ ಸಾಗಿ ಹೋಯಿತು. ಮುಸಲ್ಮಾನರ ಗುರುವು ರಂಗಯ್ಯನವರ ವೈಭವವನ್ನು ಸಹಿಸದವನಾದನು. ಮಸೀದಿಯ ಮುಂದೆ ಪರಮತೀಯರ ಉತ್ಸವಾದಿಗಳು ಸಂಪ್ರದಾಯ ವಿರುದ್ಧವೆಂದು ನವಾಬನಲ್ಲಿ ದೂರಿಟ್ಟನು.

ನವಾಬನು ಮಂತ್ರಿ ಕೃಷ್ಣರಾಯರಿಗೆ ಹೇಳಿಕಳುಹಿಸಿದನು. ರಾಯರು ಅಯ್ಯನವರಿಗೆ ವಂದಿಸಿ ನವಾಬನ ಸನ್ನಿಧಿಗೆ ಬಂದರು. ನವಾಬನಿಗೆ ರಾಯರಲ್ಲಿ ಬಹಳ ಅಭಿಮಾನ ಸನ್ನಿಧಿಗೆ ಬಂದ ರಾಯರನ್ನು ಆದರದಿಂದ ಕರೆದು ಕೂಡಿಸಿದನು. ಮಸೀದಿಯ ಮುಂದೆ ಒಬ್ಬ ವ್ಯಕ್ತಿಯ ಮೆರವಣಿಗೆ ಅಯುಕ್ತವಲ್ಲವೇ ಎಂದು ಪ್ರಶ್ನಿಸಿದನು ರಾಯರು ವಿನಯದಿಂದಲೇ “ ದೊರೇ ! ಬಂದವರು ಸಾಮಾನ್ಯರಲ್ಲ ಅವರು ಶ್ರೀನಿವಾಸನ ಪ್ರತಿನಿಧಿಗಳು ನಮ್ಮ ನಗರದ ಪುಣ್ಯಫಲದಿಂದಲೇ ಆಗಮಿಸಿರುವರು ಅವರನ್ನು ಗೌರವಿಸುವುದರಿಂದ ನಮ್ಮ ರಾಜ್ಯಕ್ಕೆ ಕ್ಷೇಮ, ಎಂದರು ರಾಯರ ಮಾತಿನಿಂದ ನವಾಬನಿಗೆ ತೃಪ್ತಿಯಾಯಿತು. ಮರುದಿನ ಅಯ್ಯನವರ ದರ್ಶನಕ್ಕಾಗಿ ತಾನು ಬರುವುದಾಗಿ ಹೇಳಿದನು.

ನವಾಬನು ಮರುದಿನ ಪ್ರಾತಃಕಾಲದಲ್ಲಿ ತನ್ನ ಗುರುಗಳೊಡನೆ ಅಯ್ಯನವರ ದರ್ಶನಕ್ಕಾಗಿ ಹುವ್ವು ಹಣ್ಣುಗಳನ್ನು ತೆಗೆದುಕೊಂಡು ಬಂದನು. ನವಾಬನ ಗುರುವಾದರೂ ಅಯ್ಯನವರನ್ನು ಅವಮಾನಿಸಬೇಕೆಂದು ತಟ್ಟೆಯಲ್ಲಿ ಮಾಂಸವನ್ನು ತುಂಬಿ ವಸ್ತ್ರದಿಂದ ಅದನ್ನು ಹೊದಿಸಿ ತಂದನು. ಅದೇ ಸಮಯಕ್ಕೆ ಸರಿಯಾಗಿ ಅಯ್ಯನವರು ಧ್ಯಾನಾಸಕ್ತರಾಗಿದ್ದರು. ಅವರು ತಮ್ಮ ಧ್ಯಾನದಲ್ಲಿ ರಾಜಗುರುವಿನ ಕುತಂತ್ರವನ್ನರಿತರು. ಧ್ಯಾನದಿಂದ ಎದ್ದು ತಮಗಾಗಿ ಕಾದು ಕುಳಿತಿದ್ದ ನವಾಬನ ಹತ್ತಿರಕ್ಕೆ ಬಂದರು. ಪ್ರೀತಿಯಿಂದ ಯೋಗಕ್ಷೇಮವನ್ನು ವಿಚಾರಿಸಿದರು. ನವಾಬನಾದರೂ ಭಕ್ತಿಯಿಂದ ಅಯ್ಯನವರಿಗೆ ತಾನು ತಂದ ಫಲಗಳನ್ನು ಸಮರ್ಪಿಸಿದನು. ರಾಜಗುರುವು ಸಹ ತಾನು ತಂದ ತಟ್ಟೆಯನ್ನು ಅಯ್ಯನವರ ಮುಂದೆ ಇರಿಸಿದನು. ' ಅಯ್ಯನವರು ಖಾಜಿಯನ್ನು ನೋಡಿ ಮುಗುಳು ನಗೆ ನಗುತ್ತಾ “ ಖಾಜಿಯವರೇ ! ಭಗವಂತನಿಗೆ ಯಾರಲ್ಲೂ ಯಾವುದರಲ್ಲೂ ದ್ವೇಷಾದಿಗಳಿಲ್ಲ. ಅವನು ಎಲ್ಲೆಡೆಯಲ್ಲೂ ವ್ಯಾಪಿಸಿರುವನು,

ರಸರೂಪಿಯಾದ ಆವನ ಸ್ಮರಣೆಯಿಂದ ಸರ್ವವೂ ರಸಮಯವಾಗಿ ಪವಿತ್ರ ವಾಗುವುದು, ಎಂದು ಹೇಳಿ ಖಾಜಿತಂದ ತಟ್ಟೆಯ ಮೇಲಿರುವ ವಸ್ತ್ರವನ್ನು ತೆಗೆಸಿದಿರು. ಆಶ್ಚರ್ಯ ! " ಋಷೀಣಾಂ ಪುನರಾದ್ಯಾನಾಂ ವಾಚ ಮರ್ಥೋನು ಧಾವತಿ ". ಜ್ಞಾನಿಗಳಾಡಿದ ಶಬ್ದಗಳನ್ನು ಅರ್ಥಗಳು ತಾವಾ ಗಿಯೇ ಅನುಸರಿಸುವವು, ಎಂಬಂತೆ ಭಕ್ತಬಂಧು ಶ್ರೀನಿವಾಸ ಅಯ್ಯನವರ ಮಾತುಗಳನ್ನು ಸತ್ಯಮಾಡಿದ. ಖಾಜಿ ತಂದ ಮಾಂಸ ಪವಿತ್ರವೂ, ಸಾತ್ವೀ ಕವೂ ಆದ ಹಣ್ಣುಗಳು ಮಾರ್ಪಾಟಾಯಿತು. ನವಾಬನಿಗೆ ಅಯ್ಯನವರ ಬಗ್ಗೆ ಭಕ್ತಿ ವಿಶ್ವಾಸಗಳು ಇಮ್ಮಡಿಯಾದವು.

ಖಾಜಿ ಮಾತ್ರ ತನ್ನ ವಂಚನೆಯನ್ನು ತೋರಗೊಡದೆ ಅಯ್ಯನವರನ್ನು ಹೇಗಾದರೂ ಅವಮಾನಿಸಬೇಕೆಂದು ತೀರ್ಮಾನಿಸಿದನು. ನವಾಬನು ಮೆಚ್ಚು ವಂತೆ ಅಯ್ಯನವರನ್ನು ಹೊಗಳಿದನು. ಕೊನೆಗೆ ಖಾಜಿಯು ಸ್ವಾಮೀ ! ಅನಾವೃಷ್ಟಿಯಿಂದ ಪೀಡಿತವಾದ ಈ ನಮ್ಮ ರಾಜ್ಯದಲ್ಲಿ ಮಳೆ ತರಿಸಿ ಅನು ಗ್ರಹಿಸಬೇಕೆಂದು ಹೇಳಿದನು. ಹರೀ ನಿನ್ನ ಚಿತ್ತಕ್ಕೆ ಬಂದುದೆನ್ನ ಚಿತ್ತಕ್ಕೆ ಬರಲಿ " ಎಂದು ನಂಬಿದ್ದ ಅಯ್ಯನವರು " ತಥಾಸ್ತು " ಎಂದರು. ರಾಜಾ ! ಭಗವದನುಗ್ರಹದಿಂದ ಇನ್ನು ಮೂರು ದಿನಗಳಲ್ಲಿ ಈ ನಿನ್ನ ಪ್ರಾಂತದಲ್ಲಿ ಅಖಂಡ ಮಳೆ ಸುರಿದು ಸುಭಿಕ್ಷೆಯಾಗುವುದೆಂದು ಹರಸಿದರು.

ಎರಡು ದಿನಗಳು ಕಳೆದವು ಮಳೆಯ ಸೂಚನೆಯೇ ಇಲ್ಲ. ಖಾಜಿಗೆ ಪರಮ ಸಂತೋಷ, ಕೃಷ್ಣರಾಯನಿಗೆ ದಿಗಿಲು. ಮುಂದಿನ ಅನಾಹುತವನ್ನು ನೆನೆದು ಕೃಷ್ಣರಾಯರು ವಿಷಪಾನ ಮಾಡಲು ನಿಶ್ಚಯಿಸಿದರು

" ಮಾನಾಭಿ ಮಾನವು ನಿನ್ನದೊ ಎನಗೇನೋ
ದೀನರಕ್ಷಕ ತಿರುಪತಿ ವೆಂಕಟರಮಣಾ"

ಎಂದು ಶ್ರೀನಿವಾಸನನ್ನು ಕಾಯೇನಾ ವಾಚಾ ಮನಸಾ ನಂಬಿದ್ದ ರಂಗಯ್ಯ [illegible] ಕೃಷ್ಣರಾಯನ ಕೃತ್ಯವನ್ನು ತಮ್ಮ ಯೋಗದೃಷ್ಟಿಯಿಂದ ನೋಡಿದವ [illegible] ರಾಯರಿಗೆ ಹೇಳಿಕಳುಹಿಸಿದರು.

ಕೃಷ್ಣರಾಯ ! ಭಗವಂತನಲ್ಲಿ ನಿನಗೆ ನಂಬಿಕೆ ಇಲ್ಲವೇ ! ನನ್ನ ಸ್ವಾಮಿ ನಂಬಿದವರನ್ನು ಎಂದೆಂದಿಗೂ ಕೈ ಬಿಡುವವನಲ್ಲ. ಶ್ರೀನಿವಾಸನನ್ನು ಸ್ಮರಿಸುತ್ತಾ ನಿಶ್ಚಿಂತನಾಗು ಎಂದನು

ಸಾಯಂಕಾಲವಾಗುತ್ತಿರಲು ಅಯ್ಯನವರು ಚನ್ನಯ್ಯನನ್ನು ಕರೆದು ಮಳೆಯ ಸೂಚನೆ ಏನಾದರೂ ಇದೆಯೇ ಎಂದರು. ಚನ್ನಯ್ಯ ಇಲ್ಲವೆಂದನು. ಶ್ರೀನಿವಾಸನನ್ನು ಸ್ಮರಿಸುತ್ತಾ ಅಯ್ಯನವರು ಒಂದು ಕಾಯಿಯನ್ನು ಚನ್ನಯ್ಯನ ಕೈಗೆ ಕೊಟ್ಟು ಆಕಾಶದತ್ತ ಎಸೆಯುವಂತೆ ಹೇಳಿದರು. ಹೀಗೆ ಎರಡು ಸಲ ಮಾಡುವುದರೊಳಗಾಗಿ ಆಕಾಶವು ಮೇಘಾವೃತವಾಯಿತು. ಭಯಂಕರವಾದ ಗುಡುಗು ಮಿಂಚುಗಳಿಂದ ಮಳೆಯು ಪ್ರಾರಂಭವಾಯಿತು. ಎಡೆಬಿಡದೆ ರಾತ್ರಿಯಲ್ಲಾ ಕುಂಭ ವೃಷ್ಟಿಯಾಯಿತು. ವಿಪರೀತವಾದ ಮಳೆಯಿಂದ ಕೆಲವು ಮನೆಗಳು ಉರುಳಿದವು. ನವಾಬನು ಹೆದರಿದನು. ಕರುಣಾಳುಗಳಾದ ಅಯ್ಯನವರು ಭಗವಂತನನ್ನು ಪ್ರಾರ್ಥಿಸಿದರು. ಮಳೆ ಕಮ್ಮಿಯಾಯಿತು. ಕೆರೆ ಭಾವಿಗಳು ನೀರಿನಿಂದ ತುಂಬಿದವು. ಜನರ ಆನಂದಕ್ಕೆ ಪಾರವೇ ಇಲ್ಲದಾಯಿತು. ನವಾಬನು ರಂಗಯ್ಯನವರ ಅಡಿದಾವರೆಗಳಲ್ಲಿ ಶಿರಬಾಗಿದನು. ಧನಕನಕ ವಸ್ತ್ರಗಳನ್ನು ಅಯ್ಯನವರಿಗೆ ಸಮರ್ಪಿಸಲು ಸನ್ನದ್ಧನಾದನು ಅಯ್ಯನವರು ಮಾತ್ರ ನವಾಬನಿಂದ ಏನನ್ನೂ ಅಪೇಕ್ಷಿಸದೆ, ದೊರೆ ! ಶ್ರೀಶೈಲ ಯಾತ್ರೆಯಿಂದ ಮರಳಿ ಬರುವಾಗ ನಮ್ಮ ಅಪೇಕ್ಷೆಯನ್ನು ನಿನಗೆ ತಿಳಿಸುತ್ತೇನೆ, ಎಂದರು.

ನವಾಬನಿಂದ ಬೀಳ್ಕೊಂಡು ಶಿಷ್ಯರೊಡನೆ ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿದರು. ಶ್ರೀಶೈಲದಲ್ಲಿ ಕೆಲದಿನಗಳಿದ್ದು "ಕೈಲಾಸವಾಸ ! ಗೌರೀಶಾ ! ತೈಲಧಾರೆಯಂತೆ ಹರಿಯಲ್ಲಿ ಮನಸ್ಸು ಕೊಡು" ಎಂದು ಪ್ರಾರ್ಥಿಸಿ ಮರಳಿ ಕರ್ನೂಲಿಗೆ ಬಂದರು.

ನವಾಬನ ಅತಿಥಿಗಳಾಗಿ ಕೃಷ್ಣರಾಯರ ಮನೆಯಲ್ಲಿ ನೆಲಸಿದರು. ಒಂದು ದಿನ ರಾತ್ರಿಯಲ್ಲಿ ಚನ್ನಕೇಶವನು ಅಯ್ಯನವರಿಗೆ ಕಾಣಿಸಿಕೊಂಡು ತನಗಾಗಿ ಶಾಶ್ವತದಲ್ಲಿ ಗುಡಿಕಟ್ಟಿಸುವಂತೆಯೂ ತಾನು ಆದವಾನಿಯಲ್ಲಿರುವ ಬಾಳೇ ತೋಟದ ಭೂಮಿಯಲ್ಲಿ ಅಡಗಿರುವುದಾಗಿಯೂ ತಿಳಿಸಿದನು. ಮರುದಿನ ಅಯ್ಯ

ನವರು ನವಾಬನಿಗೆ ತಮ್ಮ ಮನೋ ಬಯಕೆಯನ್ನು ತಿಳಿಸಿದರು. ನವಾಬನು ಅತ್ಯಂತ ಹರುಷದಿಂದ ಅಯ್ಯನವರಿಗೆ ಹೇರಳವಾಗಿ ಧನವನ್ನು ಸಮರ್ಪಿಸಿದನು.

ಅಯ್ಯನವರು ನವಾಬನು ಕೊಟ್ಟ ಧನವನ್ನು ತೆಗೆದುಕೊಂಡು ಕೌಶಾಳಕ್ಕೆ ಬಂದರು. ಕೇಶವ ದೇವಾಲಯದ ನಿರ್ಮಾಣದ ಕಾರ್ಯ ಭರದಿಂದ ಸಾಗಿತು. ಪೂರ್ವಾಭಿಮುಖವಾಗಿ ಸುವಿಶಾಲವಾದ ದೇವಾಲಯದ ನಿರ್ಮಾಣ ಮುಗಿಯಿತು. ಆಲಯದ ಮುಂದೆ ಉಟ್ಲೋತ್ಸವಕ್ಕಾಗಿ ಒಂದು ಮಂಟಪ ವನ್ನು ಸಹ ನಿರ್ಮಿಸಿದರು. ಅದೇ ಸಮಯದಲ್ಲಿ ಅಯ್ಯನವರು ತಮಗಾಗಿ ವಿಶಾಲವಾದ ವೇದಿಕೆಯ ಮೇಲೆ ಶೋಭಿಸುವ ಒಂದು ಮಂಟಪವನ್ನು ಸಹ ಕಟ್ಟಿಸಿಕೊಂಡರು. ಮಂಟಪದ ಅಡಿಯಲ್ಲಿ ತಮ್ಮ ಧ್ಯಾನಕ್ಕಾಗಿ ಒಂದು ಭೂ ಗೃಹವನ್ನು ಏರ್ಪಡಿಸಿಕೊಂಡರು. ಈ ಭೂ ಗೃಹಕ್ಕೆ ಅಯ್ಯನವರ ಮನೆ ಯಿಂದ ಒಂದು ರಹಸ್ಯ ಮಾರ್ಗವಿದೆ. ಅಯ್ಯನವರ ಮನೆ ಕೇಶವ ದೇವಾಲಯ ಹಾಗೂ ಭೂ ಗೃಹಗಳ ಮಧ್ಯದಲ್ಲಿದೆ. ಈ ಎಲ್ಲಾ ಕಾರ್ಯಗಳಲ್ಲಿ ಚನ್ನಯ್ಯನ ಸೇವೆ ಪೂರ್ಣವಾಗಿತ್ತು.

ಒಂದು ಶುಭ ಮುಹೂರ್ತದಲ್ಲಿ ಅಯ್ಯನವರು ನವಾಬನ ಪರ್ಯವೇಕ್ಷಣೆ ಯಲ್ಲಿ, ಆದವಾನಿ ಬಾಳೀಕೊಳದ ಭೂಮಿಯಲ್ಲಿ ಅಡಗಿದ್ದ ಕೇಶವನ ಸುಂದರ ಮೂರ್ತಿಯನ್ನು ಹೊರ ತೆಗೆಸಿದರು. ಚನ್ನಕೇಶವನ ಮೂರ್ತಿಯ ದರ್ಶನ ದಿಂದ ಜನರ ಜನ್ಮಗಳು ಪಾವನವಾದವು. ವಾದ್ಯ ವೈಭವಗಳಿಂದ ಚನ್ನಕೇಶವ ನನ್ನು ಕೌಶಾಳಕ್ಕೆ ಕರೆತಂದು ಪ್ರತಿಷ್ಠಿಸಿದರು. ಚನ್ನಕೇಶವನ ನಿತ್ಯಸೇವೆಗಾಗಿ ನವಾಬನು ಅನೇಕ ಭೂಮಿಗಳನ್ನು ದಾನಮಾಡಿದನು.

ಅಯ್ಯನವರು ಚನ್ನಕೇಶವನ ಸೇವೆಯಲ್ಲಿ ಕಾಲ ಕಳೆಯುತ್ತಿದ್ದರು. ಅನೇಕ ಭಕ್ತರಿಗೆ ಶ್ರೀನಿವಾಸನು ಸ್ವಪ್ನದಲ್ಲಿ ಕಾಣಿಸಿಕೊಂಡು ತಾನು ಕೌಶಾಳ ದಲ್ಲೇ ಇರುವುದಾಗಿ ಸೂಚಿಸಿದನು. ಇದರಿಂದ ತಿರುಮಲೆಗೆ ಪ್ರಯಾಣ ಬೆಳಸಿದ ಅನೇಕರು ಅಯ್ಯನವರಲ್ಲಿಗೆ ಬಂದು ವಿಷಯ ತಿಳಿಸಿ ಶ್ರೀನಿವಾಸನ ಮುಡುಪು ಗಳನ್ನು ಚನ್ನಕೇಶವನಿಗೆ ಸಮರ್ಪಿಸಿದರು. ತಮ್ಮ ಅನೇಕ ಹರಿಕೆಗಳನ್ನು [illegible] ಸನ್ನಿಧಾನದಲ್ಲಿ ನಡೆಸಿದರು. ಅಯ್ಯನವರ [illegible]ಕ್ಕೆ ಕೌಶಾಳವೇ

ತಿರುಮಲೆಯಾಯಿತು. ಕೇಶವನೇ ವೆಂಕಟೇಶನಾದ. "ನೇಹನಾನಾಸ್ತಿ ಕಿಂಚನ" ಎಂಬ ಶ್ರುತಿ ವಾಕ್ಯವು ಇದನ್ನು ಸಾರಿ ಹೇಳುತ್ತಿದೆ. ಪರಮಾತ್ಮನ ಅನಂತಾವತಾರಗಳಲ್ಲಿ ಭೇದವೇಯಿಲ್ಲ. ವೆಂಕಟೇಶ, ನರಸಿಂಹ, ಕೇಶವ, ಈ ಎಲ್ಲಾ ರೂಪಗಳು ಪರಸ್ಪರ ಅಭಿನ್ನವಾದವುಗಳು ಅಯ್ಯನವರಿಗೆ ಒಲಿದ ಶ್ರೀನಿವಾಸ ಈ ಸದ್ಭಾವನೆಯನ್ನು ಅಯ್ಯನವರ ಶಿಷ್ಯರಲ್ಲಿ ಬೇರೂರುವಂತೆ ಮಾಡಿದ.

ರಂಗಯ್ಯನವರ ಕಾಲದಲ್ಲಿ ವಾದೀಂದ್ರರು ಸುಪ್ರಸಿದ್ಧ ಯತಿಗಳು. ಜ್ಞಾನ, ಭಕ್ತಿ ವೈರಾಗ್ಯಗಳೇ ಮೂರ್ತಿ ಭವಿಸಿದ ಮಹಿತಾತ್ಮರು. ಶ್ರೀ ಮನ್ಮಧ್ವಾಚಾರ್ಯ ಪರಂಪರೆಗೆ ಸೇರಿದ ಶ್ರೀ ರಾಘವೇಂದ್ರ ಮಠದ ಯತಿಗಳು ಸನ್ಯಾಸ ಶಬ್ದಕ್ಕೆ ನಿರ್ವಚನದಂತಿದ್ದು ಧರ್ಮ ಪ್ರಚಾರಕ್ಕಾಗಿ ಬದ್ಧ ಕಂಕಣ ರಾಗಿದ್ದರು. ವಾದೀಂದ್ರರ ಪ್ರಿಯ ಶಿಷ್ಯರು ಪುರುಷೋತ್ತಮಾಚಾರ್ಯರು. ಆಚಾರ್ಯರು ಸಂಸ್ಥಾನದ ಪಂಡಿತರಾಗಿಯೂ ಇದ್ದರು. ಇವರು ಆಚಾರ್ಯ ಮಧ್ವರ ವೇದಾಂತವನ್ನು ಅನುಭವಕ್ಕೆ ತಂದುಕೊಂಡ ಪೂತಾತ್ಮರು.

ಒಮ್ಮೆ ವಾದೀಂದ್ರರು ಸಂಚಾರ ಮಾಡುತ್ತಾ ಕೌತಾಳಕ್ಕೆ ಬಂದರು. ಆ ಹೊತ್ತಿಗಾಗಲೇ ವಾದೀಂದ್ರರಿಗೆ ರಂಗಯ್ಯನವರ ವ್ಯಕ್ತಿತ್ವ ತಿಳಿದಿತ್ತು. ಗುರುಗಳ ಆಗಮನದಿಂದ ರಂಗಯ್ಯನವರಿಗೆ ಆನಂದವಾಯಿತು. ಕೇಶವ ದೇವಾಲಯದಲ್ಲಿ ವಾದೀಂದ್ರರ ಪೂಜಾದಿಗಳಿಗೆ ವ್ಯವಸ್ಥೆ ಮಾಡಲಾಗಿತ್ತು. ವಾದೀಂದ್ರರು ನೆರೆದ ಶಿಷ್ಯವೃಂದಕ್ಕೆಲ್ಲಾ ತಪ್ತಮುದ್ರಾಂಕನವನ್ನು ಮಾಡಿದರು. ಅಯ್ಯನವರು ಸಹ ಮುದ್ರಾಧಾರಣೆಗಾಗಿ ಭುಜವನ್ನು ಮುಂದೆ ಮಾಡಿದರು. ವಾದೀಂದ್ರರಿಗೆ ತಮ್ಮ ನೆಚ್ಚಿನ ಶಿಷ್ಯರಾದ ಪುರುಷೋತ್ತಮಾಚಾರ್ಯರಿಗೆ ರಂಗಯ್ಯನವರ ವ್ಯಕ್ತಿತ್ವವನ್ನು ತಿಳಿಸಿಕೊಡಬೇಕೆಂಬ ಅಪೇಕ್ಷೆ ಉಂಟಾಯಿತು. ಮುದ್ರಾಧಾರಣೆಗಾಗಿ ಮುಂದೆ ಬಂದ ರಂಗಯ್ಯನವರನ್ನು ಕಂಡು ವಾದೀಂದ್ರರು ನಸುನಕ್ಕರು. ಅಯ್ಯನವರ ಮೈತುಂಬಾ ಶಂಖ ಚಕ್ರಗಳು ಕಾಣಿಸಿಕೊಂಡವು. ಈ ದೃಶ್ಯವನ್ನು ಕಂಡು ಪುರುಷೋತ್ತಮಾಚಾರ್ಯರು ಆಶ್ಚರ್ಯಭರಿತರಾದರು.

ಭೋಜನಾನಂತರ ರಂಗಯ್ಯನವರು ಪುರುಷೋತ್ತಮಾಚಾರ್ಯರನ್ನು ತಮ್ಮ ಭೂಗೃಹಕ್ಕೆ ಕರೆದುಕೊಂಡು ಹೋದರು. ಅಯ್ಯನವರು ಹಾಗೂ ಪುರುಷೋತ್ತಮಾಚಾರ್ಯರು ಪರಸ್ಪರ ಆಲಿಂಗನ ಮಾಡಿಕೊಂಡರು. ಆಗ ಅಯ್ಯನವರು "ಆಚಾರ್ಯರೇ ನೀವು ಮಹಾ ಭಾಗ್ಯಶಾಲಿಗಳು ; ಈ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಕ್ತರಾಗಿ ಶ್ರೀ ಮೂಲರಾಮಚಂದ್ರನ ಸೇವಾಭಾಗ್ಯ ವನ್ನು ಪಡೆಯುವಿರಿ. ಆಗ ಈ ಅಲ್ಪನನ್ನು ಮರೆಯಬೇಡಿ. ನಾನು ಇನ್ನು ಕೆಲವೇ ದಿನಗಳಲ್ಲಿ ಇಹಲೋಕದ ಯಾತ್ರೆಯನ್ನು ಮುಗಿಸುವೆನು. ಭಗವತ್ಸಂಕಲ್ಪ ವಿಚಿತ್ರವಾಗಿದೆ. ಬ್ರಹ್ಮಚಾರಿಯಾದ ನನಗೆ ಬೃಂದಾವನದ ವ್ಯವಸ್ಥೆಯಾಗುವುದು ಆ ಬೃಂದಾವನದ ಸನ್ನಿಧಾನದಲ್ಲಿ ತಾವು ಶ್ರೀ ಮೂಲ ರಾಮನ ಪೂಜೆಯನ್ನು ನಡೆಸಿಕೊಡಬೇಕು ಎಂದರು. ಆನಂದ ಪರವಶರಾದ ಆಚಾರ್ಯರು ಅಯ್ಯನವರ ಕೈಗಳನ್ನು ಹಿಡಿದುಕೊಂಡು "ನಿಮ್ಮಂಥ ಭಾಗವ ತೋತ್ತಮರ ಸಂಗವನ್ನು ಕರುಣಿಸಿದ ಆ ಭಗವಂತನಿಗೆ ಅನಂತ ಪ್ರಣಾಮಗಳು" ಎಂದರು.

ಆಗ ಅಯ್ಯನವರಿಗೆ ಇರವತ್ತು ವರ್ಷಗಳು. ಕ್ರೋಧನನಾಮ ಸಂವತ್ಸರ ವನ್ನು ತಳ್ಳಿ ಅಕ್ಷಯನಾಮ ಸಂವತ್ಸರವು ಕಾಲಿರಿಸಿತು. ಅಯ್ಯನವರು ಚನ್ನಯ್ಯನನ್ನು ಕರೆದು ತಮಗಾಗಿ ಒಂದು ಬೃಂದಾವನವನ್ನು ನಿರ್ಮಿಸಲು ಹೇಳಿದರು. ಅಯ್ಯನವರ ಈ ಮಾತುಗಳು ಚನ್ನಯ್ಯನ ಪಾಲಿಗೆ ಅಶನಿಪಾತ ಗಳಾದವು. ಕಣ್ಣೀರನ್ನು ಸುರಿಸುತ್ತಾ "ತಂದೇ ! ನನ್ನನ್ನು ಕೈ ಬಿಡಬೇಡ ; ನಿನ್ನ ವಿಯೋಗವನ್ನು ನಾ ಭರಿಸಲಾರೆ" ಎಂದ. ಅಯ್ಯನವರು ಶಿಷ್ಯನನ್ನು ಸಮಾಧಾನ ಪಡಿಸುತ್ತಾ "ಚನ್ನಯ್ಯ ! ಹುಟ್ಟಿದ ಪ್ರತಿಜೀವಿ ಒಮ್ಮೆ ಸಾಯಲೇ ಬೇಕು ; ಜ್ಞಾನಿ ಮೃತ್ಯುವಿಗೆ ಭಯಪಡುವುದಿಲ್ಲ ; ಅದಕ್ಕೆ ಸ್ವಾಗತವನ್ನು ಬಯಸುತ್ತಾನೆ. ಭಗವಂತನು ಹೊಸದೊಂದು ಅಂಗಿಯನ್ನು ಕರುಣಿಸುವಾಗ ಈ ಹಳೆಯ ಅಂಗಿಗಾಗಿ ವಿವೇಕ ಪುರುಷನು ಚಿಂತಿಸುವುದಿಲ್ಲ. ಕಾಲನಾಮಕ ಪರಮಾತ್ಮನ ಆಜ್ಞೆಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ ನಿನ್ನಲ್ಲಿ ಭಗ ವಂತನ ಅನುಗ್ರಹ ಪೂರ್ಣವಿದೆ" ಎಂದರು.

ಆಗ ಚನ್ನಯ್ಯನು "ಅಯ್ಯಾ! ಹಾಗಾದರೆ ನಿನ್ನ ಪಾದದ ಅಡಿಗಲ್ಲಾಗಿ ನಾನು ಇರಬೇಕು. ನಿನ್ನ ಮಂದಿರದ ಮೆಟ್ಟಿಲಿನಲ್ಲಿ ನನಗೆ ಸ್ಥಾನವನ್ನು ಕರುಣಿಸು" ಎಂದನು. ಅಯ್ಯನವರು ಅದಕ್ಕೆ ತಮ್ಮ ಒಪ್ಪಿಗೆಯನ್ನಿತ್ತರು. ಶಿಲ್ಪಿಗೆ ಹೇಳಿ ತಮ್ಮ ಗರ್ಭಾಲಯದ ಮೆಟ್ಟಿಲಿನ ಮೇಲೆ ಚನ್ನಯ್ಯನ ರೂಪವನ್ನು ಕೆತ್ತಿಸಿದರು. ಅಯ್ಯನವರಿಗಾಗಿ ಬೃಂದಾವನ ಸಿದ್ಧವಾಯಿತು.

ಕ್ರಿ. ಶ. 1746 ಅಕ್ಷಯನಾಮ ಸಂವತ್ಸರ ವೈಶಾಖ ಬಹುಳ ದ್ವಾದಶಿ ಯಂದು ಲಯ ಚಿಂತನಾ ಪೂರ್ವಕವಾಗಿ ಎಲ್ಲರೂ ನೋಡುತ್ತಿರುವಂತೆ ಪರ ಧ್ಯಾನ ಮಾಡುತ್ತಾ ಪಾರ್ಥಿವ ಶರೀರವನ್ನು ಬಿಟ್ಟು ಹೊರಟರು.

ಚನ್ನಯ್ಯನು ಅಯ್ಯನವರ ಆದೇಶವನ್ನು ನೆರೆದ ಎಲ್ಲರಿಗೂ ತಿಳಿಸಿ, ಬೃಂದಾವನ ಪ್ರತಿಷ್ಠೆಯನ್ನು ನಡೆಸಿಕೊಡಬೇಕೆಂದು ಕೇಳಿದನು. ಊರಿನ ಪ್ರಮುಖರು ಕೆಲವರು ಬ್ರಹ್ಮಚಾರಿಗೆ ಬೃಂದಾವನ ನಿರ್ಮಾಣ ಶಾಸ್ತ್ರ ವಿರುದ್ಧ ವೆಂದು ವಾದಿಸಿ ಅಯ್ಯನವರ ದೇಹಕ್ಕೆ ದಹನ ಸಂಸ್ಕಾರ ಮಾಡಿದರು. ಅದೇ ದಿನ ರಾತ್ರಿಯೇ ಅಯ್ಯನವರು ಎಲ್ಲರ ಸ್ವಪ್ನದಲ್ಲೂ ಕಾಣಿಸಿಕೊಂಡು "ನನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿ ನಡೆದುಕೊಂಡಿರಿ ; ಆದರೂ ಚಿಂತೆಯಿಲ್ಲ ಚಿತಾ ಭಸ್ಮದಲ್ಲಿ ನನ್ನ ಕಿರಬೆರಳು, ಲಂಗೋಟಿ, ತುಳಸೀ ಮಾಲೆಗಳು ಹಾಗೆಯೇ ಇವೆ ; ಅವುಗಳನ್ನಾದರೂ ತಂದು ವೃಂದಾವನದಲ್ಲಿಟ್ಟು ಪ್ರತಿಷ್ಠೆ ಮಾಡಿರಿ" ಎಂದು ಆದೇಶಿಸಿದರು.

ಎಲ್ಲರೂ ಭಯಭೀತರಾದರು. ಸ್ಮಶಾನಕ್ಕೆ ಓಡಿದರು. ಆಶ್ಚರ್ಯ! ಅಯ್ಯನವರ ಚಿತಾಭಸ್ಮದ ಮಧ್ಯದಲ್ಲಿ ಕಿರಿಬೆರಳು ಲಂಗೋಟಿ ತುಳಸಿ ಮಾಲೆ ಗಳು ತೇಜಃಪುಂಜವಾಗಿ ಕಾಣಿಸಿದವು. ಆ ಅವಶೇಷಗಳನ್ನು ತೆಗೆದುಕೊಂಡು ಬಂದು ಬೃಂದಾವನದಲ್ಲಿಟ್ಟು ಪ್ರತಿಷ್ಠೆ ಮಾಡಿದರು. ಅಯ್ಯನವರು ಎಂದಿನಂತೆ ಬೃಂದಾವನದಲ್ಲಿದ್ದೇ ಭಕ್ತಾಭೀಷ್ಟಪ್ರದರಾದರು.

ಮೂರು ವರ್ಷಗಳು ಕಳೆದವು. ವಾದೀಂದ್ರರು ಬೃಂದಾವನ ಪ್ರವೇಶ ಮಾಡುತ್ತಾ ಪುರುಷೋತ್ತಮಾಚಾರ್ಯರಿಗೆ ಸನ್ಯಾಸ ದೀಕ್ಷೆಯನ್ನಿತ್ತು ವಸು

ಥೇಂದ್ರರೆಂದು ನಾಮಕರಣ ಮಾಡಿದರು. ವಸುಧೇಂದ್ರರು ಕುಂಭಕೋಣ ದಲ್ಲಿರುವಾಗ ಅಯ್ಯನವರು ಅವರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತಮಗೆ ರಾಮ ದೇವರ ದರ್ಶನ ಮಾಡಿಸಬೇಕೆಂದು ತಿಳಿಸಿದರು. ವಸುಧೇಂದ್ರರು ಕುಂಭ ಕೋಣದಿಂದ ಹೊರಟು ಹನ್ನೊಂದನೇ ದಿವಸಕ್ಕೆ ಕೌತಾಳಕ್ಕೆ ಬಂದು ರಂಗಯ್ಯ ನವರ ಬೃಂದಾವನದ ಸಮ್ಮುಖದಲ್ಲಿ ರಾಮದೇವರ ಪೂಜೆಯನ್ನು ಮಾಡಿದರು. ಎಲ್ಲರಿಗೂ ಮನದಟ್ಟಾಗುವಂತೆ ರಂಗಯ್ಯನವರ ವ್ಯಕ್ತಿತ್ವವನ್ನು ಸಾರಿ ಹೇಳಿದರು.

ರಂಗಯ್ಯನವರಿಗೆ ಅನೇಕ ಜನ ಶಿಷ್ಯರು ಆ ಶಿಷ್ಯಪರಂಪರೆ ಇಂದಿಗೂ ಗಡೇಕಲ್ಲು, (ಗುಂತಕಲ್ಲಿನ ಹತ್ತಿರ) ಸುಂಕೇಶಲ (ಮಂತ್ರಾಲಯದ ಹತ್ತಿರ) ಕುರವಳ್ಳಿ (ಶಿರುಗುಪ್ಪ ತಾಲ್ಲೂಕು) ಮುಂತಾದ ಪ್ರಾಂತಗಳಲ್ಲಿ ಇರುವರು. ಇವರು ಇಂದಿಗೂ ತಮ್ಮ ತಮ್ಮ ಮನೆಗಳಲ್ಲಿ ಶುಭ ಕಾರ್ಯಗಳಾದಾಗ ಕೌತಾಳಕ್ಕೆ ಬಂದು ಅಯ್ಯನವರ ಸನ್ನಿಧಿಯಲ್ಲಿ ಮುಡುಪುಗಳನ್ನು ಸಲ್ಲಿಸಿ ಹೋಗುತ್ತಾರೆ.

ಅಯ್ಯನವರ ವಂಶೀಕರು ಇಂದಿಗೂ ಪ್ರತಿನಿತ್ಯ ಚೆನ್ನಕೇಶವನ ಹಾಗೂ ಅಯ್ಯನವರ ಬೃಂದಾವನದ ಪೂಜಾದಿಗಳನ್ನೂ, ವರ್ಷಕ್ಕೊಮ್ಮೆ ಮಹೋತ್ಸವ ಮತ್ತು ಅಯ್ಯನವರ ಆರಾಧನಾ ದಿನಗಳನ್ನೂ ಅತಿ ವಿಜೃಂಭಣೆಯಿಂದ ಮಾಡಿ ಕೊಂಡು ಬರುತ್ತಿರುವರು. "ಮನೋವಿಶುದ್ಧ್ಯೈ ಚರಿತಾನುವಾದಃ" ಎನ್ನು ವಂತೆ ಜ್ಞಾನಿಗಳ ಚರಿತ್ರೆ ವರ್ಣನೆಯಿಂದ ಅಂತಃಕರಣವು ಶುದ್ಧವಾಗಿ ಭಗವ ದನುಗ್ರಹವು ಲಭಿಸುವುದು. ಕಾರಣ ಭಗವದ್ಭಕ್ತರೇ ಗತಿಯು ನಮಗೆ.

